

ಬಾರಯ್ಯ ಎನ್ನ ಮನ ಮಂದಿರಕೆ
ಬೇರೊಂದು ಯೋಚನೆ ಮಾಡದೆ ಸಿರಿಪತಿ

ನಾ ರಾಜಸಬುದ್ಧಿಯೆಂಬೆಯ ನಿನ್ನ
ಕಾರುಣ್ಯದ ಸೋನೆ ಸೊರಗುವುದೇ
ವಾರ ವಾರಕೆ ಮೇಘವಾರಿಯು ಕರೆದರೆ
ಧಾರುಣಿಗೆ ಕ್ಷಾಮ ಬರುವುದೇ ಕೃಷ್ಣ

ತಾಮಸಬುದ್ಧಿಯೆಂಬೆಯ ನಿನ್ನ
ಶ್ರೀಮೂರ್ತಿ ಹೊಳೆದರೆ ತಮವಡಗದೆ
ಶ್ರೀ ಮನೋಹರನೆ ಭಾನು ಉದಿಸಿದರೆ
ತಮವಡಗದೆ ಜಗದೊಳು ಕೃಷ್ಣ

ನಾ ದೋಷಿ ಕಠಿಣನೆಂತೆಂಬೆಯ ನಿನ್ನ
ಪಾದ ಪರಮಪಾಪಹರವಲ್ಲವೇ
ಆ ದುಷ್ಟ ಶಿಲೆ ಸೋಕೆ ಋಷಿಪತ್ನಿಯಾದಳು
ನೀ ದಯಮಾಡೆ ನಾ ನೀಚನೆ ಸಿರಿ ಕೃಷ್ಣ

— ಶ್ರೀ ವ್ಯಾಸರಾಜರು.




ಗೌರವ ಸಂಪಾದಕರು :

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೩] ಜನವರಿ ೧೯೮೩ [ಸಂಚಿಕೆ ೮


# ವಿಷಯಸೂಚಿ



ಮುಖ ಚಿತ್ರ – ಸಂಕ್ರಾಂತಿ ಶೋಭೆ – ಮಾರೆಮಂಡ ಶ್ರೀನಿವಾಸರಾವ್.

# ಸಂಪಾದಕೀಯ

ಮಕರ ಸಂಕ್ರಮಣ ಬಂದಿದೆ. ಮನುಷ್ಯರಲ್ಲಿ ಮನಗಳಲ್ಲಿ ಸಂಭ್ರಮ ಹೆಚ್ಚಿದೆ. ಪರ್ವದ ಪರಮಾರ್ಥ ಹೇಗೇ ಇದ್ದರೂ ಸಂಕ್ರಾಂತಿ ಎಂದರೆ ಕಾಣಿಸುವುದು ಚಳಿ ಕಾಯಿಸಲು ಹಾಕಿದ ಬೆಂಕಿ, ಹರಿದಾಸರು ಹಾದಿ ಬೀದಿಯಲ್ಲಿ ಹಾಡು ಪಿಕೆ, ಕೋಳಿ ಪಂದ್ಯಗಳು, ದನಗಳ ಜಾತ್ರೆ, ಮನೆ ಮನೆಯ ಮುಂಗಡೆಯಲ್ಲೂ ಆಲಂಕಾರವಾದ ರಂಗೋಲಿ, ಹೊಸ ಅಳಿಯಂದಿರ ಹಿರಿತನ, ಒಂದೇನು ಎರಡೇನು? ಅದೊಂದು ಹೊಸ ಅನುಭವವೇ ಆಗುತ್ತದೆ.

ನಿಜವಾಗಿಯೂ ಈ ಹಬ್ಬ ಏಕೆ ಎಂದು ಆಲೋಚಿಸಿದಲ್ಲಿ ಹೊಸ ಹೊಸ ಉತ್ತರಗಳು ದೊರೆಯುತ್ತವೆ. ಸಂಕ್ರಮಣವೆಂದರೆ ಒಂದು ಸ್ಥಿತಿಯನ್ನು ದಾಟಿ ಮತ್ತೊಂದು ಸ್ಥಿತಿಗೆ ಹೋಗುವಿಕೆ. ಗತಿಭೇದ, ಕಾಲಭೇದಗಳ ಹೊರತು ನವಗ್ರಹಗಳಲ್ಲಿ ಎಲ್ಲಕ್ಕೂ ಈ ಸಂಕ್ರಮಣ ಇರುವುದೇ. ಎಂದ ಮೇಲೆ ಈ ರವಿಸಂಕ್ರಮಣಕ್ಕೇಕೆ ಇಷ್ಟೊಂದು ಪ್ರಾಧಾನ್ಯ? ಸೂರ್ಯನೂ ಪ್ರತಿ ತಿಂಗಳೂ ಒಂದೊಂದು ರಾಶಿಯಲ್ಲಿ ನಡೆಯುತ್ತಿರುವಾಗ ಕೇವಲ ಈ ಮಕರ ಕರ್ಕಾಟಕ ಸಂಕ್ರಾಂತಿಗಳಿಗೆ ಅದರಲ್ಲೂ ಮಕರ ಸಂಕ್ರಾಂತಿಗೇ ಏಕೆ ಪ್ರಾಧಾನ್ಯ?

ನಾವು ಪೂಜಿಸುವ ದೇವತೆಗಳೆಲ್ಲ ಅದೃಶ್ಯರೇ. ಅದೃಶ್ಯರಾಗಿದ್ದೇ ಶಕ್ತಿ ಪ್ರದರ್ಶನ ಮಾಡುವವರು. ಆದರೆ ಸೂರ್ಯ ಚಂದ್ರರು ಮಾತ್ರ ಕಣ್ಣಿಗೆ ಕಾಣಿಸಿಕೊಂಡು ನಮ್ಮ ಜೀವನಗತಿಗಳಲ್ಲಿ ಸಾಕಷ್ಟು ಬದಲಾವಣೆಯನ್ನು ತರುತ್ತಾರೆ. (ಮಾನವ ಜೀವನದ ಮೇಲೆ ಗ್ರಹಗಳ ಪ್ರಭಾವ ಎಂಬುದೇ ಒಂದು ಪ್ರತ್ಯೇಕ ಪ್ರಬಂಧ ವಸ್ತುವಾಗಬಲ್ಲುದು) ಖಗೋಳ ಶಾಸ್ತ್ರರೀತ್ಯಾ ಚಂದ್ರ ಸ್ವಯಂಪ್ರಕಾಶವನ್ನು ಪಡೆದಿಲ್ಲವಾದರೂ ಸೂರ್ಯ ಮಾತ್ರ ಹಾಗಲ್ಲದೆ ತನ್ನ ಪ್ರಕಾಶದಿಂದಾಗಿಯೇ ನಮ್ಮಲ್ಲಿನ ಜೀವವನ್ನು ನಿರ್ದೇಶಿಸುತ್ತಾನೆ. ಸೂರ್ಯ ಗತಿಯಿಂದಾಗಿಯೇ ಋತುವ್ಯತ್ಯಾಸಗಳಾಗುತ್ತವೆ. ಎಂತಲೇ ಸೂರ್ಯನನ್ನು ಜ್ಯೋತಿಷ್ಯಶಾಸ್ತ್ರ ಆತ್ಮಕಾರಕನೆಂದೂ ಶನಿಯನ್ನು ಆಯುಷ್ಯಕಾರಕನೆಂದೂ ಹೆಸರಿಸಿದೆ. ಎಂತಲೇ ಜಾತಕ ಬಲಕ್ಕೂ ಬಹುತೇಕ ರವಿಚಾರವೇ ಆಧಾರವಾಗುತ್ತದೆ. ಹಾಗಾಗಿ ಸೂರ್ಯನು ಜಗತ್ ಸ್ರಷ್ಟ, ನಾವು ಚಾಂದ್ರಮಾನವನ್ನೇ ಅನುಸರಿಸುತ್ತಿದ್ದರೂ ಮಕರದಿಂದ ಮಕರದವರೆಗಿನ ಸೂರ್ಯ ಸಂಕ್ರಮಣವನ್ನು ಒಂದು ಸಂವತ್ಸರವೆಂದೂ, ಕರ್ಕಾಟಕ ಸಂಕ್ರಮಣವನ್ನು ತದರ್ಧವೆಂದೂ ಯಾವುದೋ ಒಂದು ಕಾಲದಲ್ಲಿ ಪರಿಗಣಿಸಿರಬಹುದು. ಈ ಭಾವನೆ ನಿಜವಾದಲ್ಲಿ ಇದು ಆಂಗ್ಲ ಕಾಲಪರಿಮಾಣಕ್ಕೆ ಬಹು ಹತ್ತಿರವಾಗುತ್ತದೆ.

ವೈದಿಕ ವಾಙ್ಮಯದಲ್ಲಿ ಸೂರ್ಯನನ್ನು ನಾರಾಯಣನ ನೇತ್ರ ರೂಪವಾಗಿಯೂ, 'ಚಂದ್ರಮಾ ಮನಸೋ ಜಾತಃ' ಎಂದೂ ವರ್ಣಿಸಲಾಗಿದೆ. ಇವೆರಡೂ ಆಯಾ ವಸ್ತು ಧರ್ಮಗಳೆಂದೂ ಭಾವಿಸಬಹುದು. ಪುನಃ ಸೃಷ್ಟಿಯನ್ನು ಸಂಕಲ್ಪಿಸಿದ ಪ್ರಜಾಪತಿ ಮೊಟ್ಟ ಮೊದಲಿಗೆ ಆದಿತ್ಯ, ರಯಿಗಳನ್ನು ದಿವಾರಾತ್ರಿ ಭಾವನೆಯಾಗಿ ಸೃಷ್ಟಿಸಿದನೆಂದೂ ಆದಿತ್ಯ ರೂಪವೇ ಪುರುಷರೂಪವೆಂದೂ ರಯಿ ಸ್ತ್ರೀ ರೂಪವೆಂದೂ ಉಪನಿಷತ್ತುಗಳಲ್ಲಿ ಹೇಳಲಾಗಿದೆ. ಹೀಗೆ ನೋಡಿದಾಗಲೂ ಹದಿನಾಲ್ಕು ಭವನಗಳ ಸೃಷ್ಟಿಕರ್ತ ಶ್ರೀಮನ್ನಾರಾಯಣನೇ ಆದಾಗ ಈ ವಿಶಾಲ ವಿಶ್ವಪುರುಷ ಸೂರ್ಯ ನೆಂಬುದರಲ್ಲಿ ಸಂದೇಹವಿಲ್ಲ. ಮೇಲಾಗಿ ಪುರಾಣ ವಾಙ್ಮಯವೆಲ್ಲ

ಸವಿತೃ ಮಂಡಲ ಮಧ್ಯವರ್ತೀ
ಧ್ಯೇಯೋ ನಾರಾಯಣಸ್ಸದಾ

– ಎಂದು ಆದಿತ್ಯ ಮಂಡಲಾಂತರ್ಗತ ನಾರಾಯಣೋಪಾಸನೆಯನ್ನು ವ್ಯಕ್ತ ಪಡಿಸುತ್ತದೆ. ಎಂತಲೇ ಇರಬೇಕು ಸೂರ್ಯನಿಗೆ ನಾರಾಯಣತ್ವವುಂಟಾಗಿ ಸೂರ್ಯನಾರಾಯಣನಾಗಿರುವುದು. ಹಾಗಿಯೇ ಸೂರ್ಯನಿಗೆ ಮಾಡಿದ ನಮನ ನಾರಾಯಣನನ್ನು ಸೇರುವುದು. ಆದ್ದರಿಂದಲೇ ಮಕರ ಸಂಕ್ರಮಣದಿಂದ ಆರಂಭವಾದ ಉತ್ತರಾಯನ ಕಾಲವೆಲ್ಲ ಪಾರಮಾರ್ಥಿಕ ಕಾರ್ಯಗಳಿಗೂ, ದಕ್ಷಿಣಾಯನ ಕಾಲ ಐಹಿಕ ಕಾರ್ಯಗಳಿಗೂ ಉತ್ತಮವೆನ್ನುವುದು. ಮೂಲ ವಿಷಯವನ್ನು ಮರೆತು ಹಬ್ಬವನ್ನಾಚರಿಸುತ್ತಿದ್ದರೂ ಅಂತರಾರ್ಥ ಅದೇ.

ತಾರ್ಕಿಕವಾಗಿ ನೋಡಿದರೆ ನಮ್ಮ ಹಬ್ಬಗಳಲ್ಲಿ ಹಿರಿಯ ಸಂದೇಶ ಅಡಗಿರುತ್ತದೆ. ಸೂರ್ಯಾಯಣಕ್ಕೆ ಸಂಬಂಧಿಸಿದ ಕರ್ಕಾಟಕ ಮಕರಗಳೆರಡೂ ಉಭಯ ಚರಗಳಿಗೆ ಸಂಬಂಧಿಸಿದವು. ವಂಚನ ಶೀಲವಾದುವು. ರವಿ ಮಕರಗತನಾದರೂ ಶಾಸಕನಾಗಿರುವುದರಿಂದ ಪ್ರಮಾದವಿಲ್ಲ. ಆದರೆ ಪಂಚಭೂತಗಳು ಸಾರ್ವಕಾಲಿಕವೆಂದು ಸಾರ್ವದೇಶಿಕವೆಂದೂ ತಿಳಿದೂ ಸಹ, ಧನ, ಬಲ, ಅಧಿಕಾರ, ಗರ್ವ, ವರ್ಗ, ವರ್ಣ ವ್ಯತ್ಯಾಸಗಳೆಂಬ ಮಕರ ಬಲಕ್ಕೆ ವಶವಾಗಿ ತನ್ನ ತಾನು ರಕ್ಷಿಸಿ ಕೊಳ್ಳಲಾರದೆ ಸಂಸಾರ ಕಾಸಾರದಲ್ಲಿ ಸಿಕ್ಕಿಕೊಂಡಿರುವಲ್ಲಿ ಜ್ಞಾನ ಭಾಸ್ಕರನಿಗೆ ನಿತ್ಯ ಮಕರ ಸಂಕ್ರಮಣವೇ. ಅದನ್ನು ದಾಟಿದಲ್ಲಿ ಮಾತ್ರವೇ ಇಹದಲ್ಲಿ ಸುಖವೂ ಪರದಲ್ಲಿ ಶಾಂತಿಯೂ ಸಿದ್ಧಿಸೀತು.

" ತೇಜಸ್ವಿನಾ ವಧೀತಮಸ್ತು ಮಾವಿದ್ವಿಷಾವಹೈ "

# ಆನಂದಕಂದ

## ಶ್ರೀ ವಸಂತಕುಷ್ಟಗಿ

ಶ್ರೀಯುತ ಬೆಟಗೇರಿ ಕೃಷ್ಣಶರ್ಮರ ಸಾಹಿತ್ಯಕ ಸಾಧನೆ ಅಪಾರ. ಕಾದಂಬರಿಕಾರರೂ, ನಾಟಕಕಾರರೂ, ಕವಿಗಳೂ ಪತ್ರಕರ್ತರೂ ಆಗಿ ಹಲವು ಹನ್ನೊಂದು ರೀತಿಯಲ್ಲಿ ನಾಡು ನುಡಿಗಳ ಸೇವೆ ಸಲ್ಲಿಸಿದ ಈ ಹಿರಿಯರು ಈಚೆಗೆ ತಮ್ಮ ಸಾಹಿತ್ಯ ಸೇವೆಗೆ ವಿರಾಮ ನೀಡಿ ನಮ್ಮಿಂದ ದೂರ ವಾದರು. ಅವರ ಬಹುಮುಖ ಕ್ರಿಯಾಶೀಲತೆಯಲ್ಲಿನ 'ಪೂರ್ವಕೃತಿ ಸಂಪಾದನಾ' ವಿವರಗಳನ್ನು ಲೇಖಕರು ಇಲ್ಲಿ ಚಿತ್ರಿಸಿದ್ದಾರೆ.

—ಸಂ ॥

"ಆನಂದಕಂದ" ಎಂದು ಖ್ಯಾತಿಗೊಂಡ ಡಾ॥ ಬೆಟಗೇರಿ ಕೃಷ್ಣಶರ್ಮರ ಬದುಕು ಆರ್ಥಿಕ ಕಷ್ಟಕಾರ್ಪಣ್ಯಗಳಿಂದ ತುಂಬಿ ತುಳುಕುತ್ತಿದ್ದರೂ ಸಂಸ್ಕೃತಿಯ ಶ್ರೀಮಂತ ಕಣಜವಾಗಿದೆ. ಪಾಂಡಿತ್ಯ ಪ್ರತಿಭೆಗಳ ಮಧುರ ಸಂಗಮವಾಗಿದೆ. ಅಲ್ಲಿ ತುಂಬಿರುವುದೆಲ್ಲ ಕರ್ನಾಟಕಾಂತರ್ಗತ ಭಾರತೀಯತ್ವದ ವಜ್ರವೈಡೂರ್ಯಗಳು. ಆ ಬದುಕಿನ ಆಳಕ್ಕೆ ಹೋದಂತೆಲ್ಲ ಆನಂದದ ಬೆಳಕೇ ಬೆಳಕು.

೧೯೦೦ ರಿಂದ ಇಲ್ಲಿಯವರೆಗೆ ಡಾ॥ ಬೆಟಗೇರಿ ಕೃಷ್ಣಶರ್ಮರು ವಿಸ್ತಾರವಾದ ತಮ್ಮ ಬದುಕಿನಲ್ಲಿ ಪ್ರಾಮಾಣಿಕತೆಗೆ ಅಗ್ರಸ್ಥಾನಕೊಟ್ಟು ತಾವು ಪಡೆದ ಶ್ರೀಮಂತ ಅನುಭವಗಳ ಆಧಾರದ ಮೇಲೆ ಕರ್ನಾಟಕ ಜನತೆಯ ಸಾಹಿತ್ಯ ಸಂಸ್ಕೃತಿಗಳಿಗೆ ಪ್ರೇರಕಶಕ್ತಿಯಾಗಿ ನಿಂತಿದ್ದಾರೆ. ಕರ್ನಾಟಕದ ಗತವೈಭವದ ಅಂತಃಸತ್ವಗವನ್ನು ಕಂಡು ಹಿಡಿದು ಉಜ್ವಲ ಭವಿಷ್ಯತ್ತಿನ ಸಾಧನೆಗೆ ಪ್ರಚೋದನೆಯನ್ನು ನೀಡುತ್ತ ಬಂದಿದ್ದಾರೆ. ಅವರ ವೈವಿಧ್ಯ ಪೂರ್ಣ ಸಾಹಿತ್ಯ ಸೇವೆಯಲ್ಲಿ ಸಮಾವೇಶಗೊಳ್ಳುವ ಕಾದಂಬರಿ, ಸಣ್ಣ ಕತೆ, ಕವನ, ಪತ್ರಿಕಾ ವ್ಯವಸಾಯಗಳಂತೆ ಅವರ ಸಂಪಾದಿತ ಕೃತಿಗಳಿಗೂ ವಿಶಿಷ್ಟವಾದ ಸ್ಥಾನವಿದೆ. ವಿಶೇಷವಾಗಿ ದಾಸಸಾಹಿತ್ಯದ ಸಂಪಾದನೆಯಲ್ಲಿ ಡಾ॥ ಬೆಟಗೇರಿಯವರ ಕಾರ್ಯವು ಅಮೋಘ. ಅವರ ಶಾಸ್ತ್ರೀಯ ದೃಷ್ಟಿ, ಪ್ರಗಾಢ ಪಾಂಡಿತ್ಯದ ಭದ್ರ ತಳಹದಿ ವಿಶಾಲವಾದ ಅನುಭವದ ಅಂತಃಸತ್ವ, ವಿವೇಚನಾಪರ ಹಂಸಕ್ಷೀರನ್ಯಾಯ ನಿರ್ಣಯಗಳು ಅವರು ಸಂಪಾದಿಸಿದ ಕೃತಿಗಳಲ್ಲೆಲ್ಲ ಹಾಸು ಹೊಕ್ಕಾಗಿದ್ದು, ಆ ಗ್ರಂಥಗಳೆಲ್ಲ ಚೊಕ್ಕಚಿನ್ನವಾಗಿ ಸಾರಸ್ವತ ಲೋಕದಲ್ಲಿ ಸದಾ ಶೋಭಿಸುವ ಶಕ್ತಿಯನ್ನು ಪಡೆದಿವೆ.

ರಚನಾತ್ಮಕ ಸಾಹಿತ್ಯ ಸೃಷ್ಟಿಗಿಂತಲೂ ಸಂಪಾದನಾ ಕಾರ್ಯವು ಬಹು ಗಡುಸಿನ ಕೆಲಸ. ಏಕೆಂದರೆ ಇದರಲ್ಲಿ ಸಂಶೋಧಕನ ಪ್ರಾಮಾಣಿಕ ದೃಷ್ಟಿಗೆ ಪ್ರಥಮಸ್ಥಾನ. ವಿಶೇಷವಾಗಿ ಸಂಪಾದನಾ ಕಾರ್ಯವು ೧೯ನೆಯ ಶತಮಾನಕ್ಕಿಂತ ಮೊದಲಿನ ಕೃತಿಗಳಿಗೆ ನಡೆಯಬೇಕಾದುದ್ದು. ಆ ಮೊದಲು ಅಚ್ಚುಕೂಟದ ವ್ಯವಸ್ಥೆ ಇರಲಿಲ್ಲ. ಅದಕ್ಕಾಗಿ ಕಾವ್ಯಗಳನ್ನು ನೋಡಿಯೋ ಕೇಳಿಯೋ ಬರೆದಿಡುವ ಕ್ರಮವಿದ್ದಿತು. ಹಾಗೆ ಬಾಯಿಯಿಂದ ಬಾಯಿಗೆ ಬರುವಾಗ, ಬರೆದಿಡುವಾಗ ಏನೇನೋ ತಪ್ಪುಗಳು ನಡೆದುಕೊಂಡು ಬರುತ್ತಿದ್ದುವು. ಬಹುಕಾಲದ ನಂತರ ಆ ಪುಸ್ತಕಗಳ ಅನೇಕ ಪುಟಗಳು ಪುಡಿಪುಡಿಯಾಗುತ್ತಿದ್ದವು. ಅಂತಹ ಆಕರಗಳನ್ನೇ ಸ್ವೀಕರಿಸಿ, ಅಚ್ಚುಕೂಟಗಳು ಬಂದ ಮೇಲೆ, ಶುದ್ಧ ಪಾಠಾಂತರಗಳನ್ನು ನೀಡಿ, ಹಿಂದಿನ ಕೃತಿಗಳನ್ನು ಸಂಪಾದಿಸಿ ಪ್ರಕಟಿಸುವ ಕಾರ್ಯ ರೂಢಿಯಾಯಿತು. ಈ ಕೆಲಸವನ್ನು ಡಾ॥ ಬೆಟಗೇರಿಯವರು ಸಮರ್ಪಕವಾಗಿಯೂ ಲೀಲಾಜಾಲವಾಗಿಯೂ ಎಸಗಿದ್ದಾರೆ. ಅಷ್ಟೇ ಅಲ್ಲ, ಅವರ ಈ ಕೆಲಸವೆಲ್ಲ ಚೊಕ್ಕಚಿನ್ನವಾಗಿದ್ದು ಸಂಪಾದನಾ ಶಾಸ್ತ್ರಕ್ಕೆ ಅವರ ವಿಶೇಷ ಕೊಡುಗೆಯಾಗಿದೆ.

ಸಂಪಾದನಾ ಕಾರ್ಯಕ್ಷೇತ್ರದಲ್ಲಿ ವಿಸ್ತಾರವಾದ ಹಾಗೂ ಆಳವಾದ ಅನುಭವವು ಡಾ॥ ಬೆಟಗೇರಿಯವರಿಗೆ ಇರುವುದರಿಂದ ಅವರು ಈ ಕಾರ್ಯಕ್ಷೇತ್ರಕ್ಕೆ ಉಪಯುಕ್ತವಾದ ಸೂತ್ರರೂಪೀ ಮಾತುಗಳನ್ನು ಹೇಳಿದ್ದಾರೆ. ಅವುಗಳನ್ನು ಇಲ್ಲಿ ಸಂಗ್ರಹಿಸಬಹುದು. ಅವರ ಅನುಭವದ ನಿಚ್ಚಳ ದೃಷ್ಟಿಯ ಪ್ರಕಾರ ಸಂಶೋಧನಾತ್ಮಕ ಸಂಕಲನಗಳನ್ನು ತರಬೇಕಾದಾಗ ಅವಧಿಯ ಪರಿಮಿತಿಯು ಇರಕೂಡದು. ಅವಧಿಯ ಪರಿಮಿತಿಯಲ್ಲಿ ಸಂಪೂರ್ಣತೆ ನಿರ್ದುಷ್ಟತೆಗಳು ಸಾಧಿಸಲಾರವು. ಇಂಥ ಕೆಲಸದಲ್ಲಿ ಮತಾತೀತ ದೃಷ್ಟಿಯಿರಬೇಕು. ಕೃತಿಯು ಸೃಷ್ಟಿಯಾದ ಕಾಲದ ಪ್ರಜ್ಞೆಯು ಬೇಕು. ಇವುಗಳ ಬಲದಿಂದ ಮತ ಧರ್ಮ ಮತ್ತು ಸಾರ್ವಲೌಕಿಕ ಧರ್ಮಗಳು ವಿಂಗಡಿಸಲು ಬಾರದಷ್ಟು, ಆ ಕೃತಿಗಳಲ್ಲಿ ಸಮರಸವಾಗಿರತ್ತವೆ ಎಂಬುದನ್ನು ಮನಗಾಣಬಹುದು. ಇದನ್ನೇ ಸಂಪಾದನಾ ಕಾರ್ಯದ ಭದ್ರತಳಹದಿಯೆಂದು ಕರೆಯಬಹುದು. ಇಂಥ ಭದ್ರ ತಳಹದಿಯು ಬೆಟಗೇರಿಯವರ ಸಂಪಾದನಾ ಕೃತಿಗಳಿಗೆ ಸುಭದ್ರವಾಗಿದೆ.



ದಿವಂಗತ ಡಾ ॥ ಬೆಟಗೇರಿ ಕೃಷ್ಣಶರ್ಮ

ಡಾ ॥ ಬೆಟಗೇರಿಯವರು ಸಂಪಾದಿಸಿರುವ ಕೃತಿಗಳಲ್ಲಿ ಭಾವಗೀತ ಸಂಕಲನ, ಪ್ರಸನ್ನ ವೆಂಕಟದಾಸರ ಭಾಗವತ, ಮೃಚ್ಛಕಟಿಕ ನಾಟಕ, ಪುರಂದರದಾಸರ ಸಾಹಿತ್ಯದ ಆರು ಸಂಪುಟಗಳು, ಕನಕದಾಸರ ಗೀತೆಗಳು, ಅಕ್ರೂರ ಚರಿತ್ರೆ ಮೊದಲಾದುವು ಬಹುಮುಖ್ಯವಾದುವು. ಇವುಗಳಲ್ಲದೆ ಅವರು ಮಕ್ಕಳಿಗಾಗಿ ಶ್ರೀ ಬಸವಣ್ಣನವರು, ಲವಕುಶರು, ಪಿತಾಮಹ ಭೀಷ್ಮ, ರಣಧೀರ ಕರ್ಣ – ಮೊದಲಾದ ಚರಿತ್ರೆಯ ಪುಸ್ತಕಗಳನ್ನು ಸಂಪಾದನೆ ಮಾಡಿ ಮಕ್ಕಳ ಸಾಹಿತ್ಯದ ಕಣಜದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಗೌರೀಶವಾಚನ ಮಾಲೆಯ ಪಠ್ಯಪುಸ್ತಕಗಳನ್ನು ಸಂಪಾದಿಸಿದ್ದಾರೆ. ಅವು ಬಹುದಿವಸಗಳವರೆಗೆ ಮುಂಬಯಿ ಕರ್ನಾಟಕದಲ್ಲಿ ೫ನೆಯ ತರಗತಿಯಿಂದ ೧೦ನೆಯ ತರಗತಿಯ ವರೆಗೆ ಕನ್ನಡ ಸಾಹಿತ್ಯದ ಸೊಗಸನ್ನು ಎಳೆಯರಲ್ಲಿ ಹರಡುತ್ತ ಜನಪ್ರಿಯತೆಯನ್ನು ಗಳಿಸಿದವು. ಅಷ್ಟೇ ಅಲ್ಲ ಈಗಲೂ ಆ ಪುಸ್ತಕಗಳನ್ನು ತೆಗೆದು ನೋಡಿದರೆ, ಮಕ್ಕಳ ಮನಸ್ಸನ್ನು ಅರಿತಿರುವ ಸಂಪಾದಕನ

ಸಂಪಾದನಾ ಕೌಶಲವನ್ನು ಮೆಚ್ಚಬೇಕಾಗುತ್ತದೆ. ಆ ಮಾದರಿಯನ್ನು ಇಂದಿನ ಸಂಪಾದಕರು ಅದೇಕೆ ಅಳವಡಿಸಿಕೊಂಡಿಲ್ಲನ್ನು ಎಂದು ಒಂದು ಕ್ಷಣ ವಿಚಾರಮಾಡುತ್ತ ಮೂಕರಾಗಬೇಕಾಗುತ್ತದೆ.

ಡಾ॥ ಬೆಟಗೇರಿಯವರಲ್ಲಿ ಮೇಲೆ ವಿವರಿಸಿದಂತೆ ಸಂಶೋಧನೆ ಸಂಪಾದನೆಗಳ ಒಲವು ಕರ್ಣಕವಚವಾಗಿಯೇ ಬಂದುದು. ಆದರೆ ಅದು ಸಾರಸ್ವತ ಲೋಕಕ್ಕೆ ಪರಿಚಯವಾಗತೊಡಗಿದುದು ೧೯೩೭ರಿಂದ, ಅವರು ರಾಷ್ಟ್ರೀಯ ಶಾಲೆಯಲ್ಲಿ ಶಿಕ್ಷಕರಾಗಿ ಕೆಲಸಮಾಡುತ್ತಿದ್ದಾಗ. ಆ ವರ್ಷ 'ಭಾವಗೀತೆ' ಎಂಬ ಸಂಕಲನವನ್ನು ಸಂಪಾದಿಸಿ ಸಾಹಿತ್ಯ ಸಂಪಾದನಾ ಕಾರ್ಯಕ್ಕೆ ನಾಂದಿ ಹೇಳಿದುದು ಐತಿಹಾಸಿಕ ದಾಖಲೆಯಾಗಿದೆ. ಆ ಸಂಕಲನವು ಸಾಹಿತ್ಯ ಸಂಪಾದನಾಕಲೆಗೆ ಒಂದು ಉತ್ತಮವಾದ ಕಾಣಿಕೆ ಮತ್ತು ದಿಟ್ಟ ಹೆಜ್ಜೆ ಎಂಬುದನ್ನು ಎಂದಿಗೂ ಮರೆಯಲಾಗದು.

೧೯೩೮ರ ಸುಮಾರಿಗೆ ಕೌಜಲಗಿ ಬಂಡೇರಾಯರ ಜೊತೆಯಲ್ಲಿ ಸಂಪಾದಿಸಿ ಪ್ರಕಟಿಸಿದ "ಪ್ರಸನ್ನ ವೆಂಕಟದಾಸರ ಭಾಗವತ ದಶಮಸ್ಕಂಧ ಪೂರ್ವಾರ್ಧ"ವು ಡಾ॥ ಬೆಟಗೇರಿಯವರ ಸಂಪಾದನಾ ಸಾಹಿತ್ಯ ಕಾರ್ಯ ರತಿಯು ಮಾಗುತ್ತ ಸಾಗಿದುದರ ಮಹತ್ತ್ವದ ಹೆಜ್ಜೆ. ಈ ಭಾಗವತ ದಶಮಸ್ಕಂಧವು ಪ್ರಸನ್ನ ವೆಂಕಟದಾಸರ ಕೃತಿಗಳಲ್ಲೆಲ್ಲ ಶ್ರೇಷ್ಠವಾದುದು. ಕಾರಣ ಇದು ಶ್ರೀಕೃಷ್ಣ ಭಕ್ತಿಯ ಕಣಿಯೇ ಆಗಿರುವುದರಿಂದ ಎಂದು ಹೇಳಿದರೂ ತಪ್ಪಾಗಲಾರದು. ಅಂತೆಯೇ ಇದು ಬಹುಕಾಲದಿಂದ ಜನಪ್ರಿಯವಾಗಿ ಉಳಿದಿದೆ. ಆದರೆ ಹೆಣ್ಣು ಮಕ್ಕಳು ಈ ಗ್ರಂಥದ ಹಾಡುಗಳನ್ನು ಬಾಯಿಯಿಂದ ಬಾಯಿಗೆ ಹೇಳುತ್ತ, ವಹಿಯಿಂದ ವಹಿಗೆ ಬರೆಸಿಟ್ಟು ಕಾಪಾಡಿಕೊಂಡು ಬರುವ ಕ್ರಮದಲ್ಲಿ ಅನೇಕ ವ್ಯಾಕರಣ ದೋಷಗಳನ್ನು ಉಳಿಸಿಕೊಂಡು ಬಂದರು. ಅದರಂತೆ ಅಪಶಬ್ದಗಳನ್ನು ಕೂಡ. ಇವುಗಳನ್ನೆಲ್ಲ ತಿದ್ದುವ ಕೆಲಸ ಆಗ ಬಹು ಮುಖ್ಯವಾಗಿ ಕಂಡು ಬಂದಿತು. ಆ ಕೆಲಸಕ್ಕೆ ಸಮರ್ಥರಾದವರೆಂದರೆ ಬೆಟಗೇರಿಯವರೆಂದು ನಿರ್ಣಯಿಸಿ ಕೌಜಲಗಿ ಬಂಡೇರಾಯರು, ಬೆಟಗೇರಿಯವರಿಗೆ ಅದನ್ನು ವಹಿಸಿಕೊಟ್ಟರು. ಆಗ ಬೆಟಗೇರಿಯವರು ೩–೪ ಹಸ್ತಪ್ರತಿಗಳ ಆಧಾರದ ಮೇಲಿಂದ ಆ ತಪ್ಪುಗಳನ್ನೆಲ್ಲ ಸರಿಪಡಿಸಿ ಅರ್ಥ ಟಿಪ್ಪಣಿಗಳನ್ನೂ ಬರೆದು ಪ್ರಸನ್ನ ವೆಂಕಟದಾಸರ ಭಾಗವತವು ಪಂಡಿತ ಪಾಮರರಿಗೂ ಅಚ್ಚುಮೆಚ್ಚಾಗುವಂತೆ ಮಾಡಿದರು. ಆ ಪರಿಣಾಮವಾಗಿ ಆ ಗ್ರಂಥವು ದಾಸ ಸಾಹಿತ್ಯದ ಅಪರೂಪವಾದ ಕೃತಿರತ್ನಗಳಲ್ಲಿ ಒಂದು ಎಂದು ಪರಿಗಣಿತವಾಯಿತು.

ಡಾ॥ ಬೆಟಗೇರಿಯವರಿಗೆ ಕನ್ನಡಭಾಷಾ ಸಾಹಿತ್ಯದಷ್ಟೇ ಆಳವಾದ ಅಭ್ಯಾಸ ಮತ್ತು ಪ್ರಭುತ್ವಗಳು ಸಂಸ್ಕೃತಭಾಷಾ ಸಾಹಿತ್ಯದಲ್ಲಿಯೂ ಇತ್ತು. ಅವರು ಪಂಪ, ರನ್ನ, ರುದ್ರಭಟ್ಟ, ಕುಮಾರವ್ಯಾಸರನ್ನು ಅರಗಿಸಿಕೊಂಡಿದ್ದಂತೆ ಕಾಲಿದಾಸ, ಭವಭೂತಿ. ಭಾಸ, ಶೂದ್ರಕ, ಭಟ್ಟನಾರಾಯಣ, ಮೊದಲಾದವರನ್ನೂ ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ಅಂತೆಯೇ ಶೂದ್ರಕ ಕೃತ ಮೃಚ್ಛಕಟಿಕವನ್ನು ಎದುರಿಗೆ ಇಟ್ಟುಕೊಂಡೇ ೧೯೪೭ ರಲ್ಲಿ ರಚನೆಯಾದ ದೊಂಡೋಟಿ ನರಸಿಂಹ ಮುಳಬಾಗಿಲ ಅವರ ಕನ್ನಡ ಮೃಚ್ಛಕಟಿಕ ನಾಟಕದ ಅಚ್ಚುಕಟ್ಟಾದ ಪರಿಷ್ಕರಣ ಮಾಡಲು ಸಾಧ್ಯವಾಯಿತು. ದಿವಂಗತ ಮುಳಬಾಗಿಲ ಅವರು, ಧಾರವಾಡದ ಕನ್ನಡ ಟ್ರೇನಿಂಗ್ ಕಾಲೇಜಿನ ಅಧ್ಯಾಪಕರಾಗಿದ್ದವರು. ಅವರು ಬಾಳಿದ ಕಾಲ ಕನ್ನಡಕ್ಕೆ ನೆಲೆಯಿಲ್ಲದೆ ಬಲವಿಲ್ಲದೆ ಬಳಲುತ್ತಿದ್ದ ಕಾಲ. ಅಂಥಕಾಲದಲ್ಲಿ ಅವರು ಭವಭೂತಿಯ ಉತ್ತರರಾಮ ಚರಿತೆಯನ್ನೂ, ಶೂದ್ರಕನ ಮೃಚ್ಛಕಟಿಕವನ್ನೂ ಭಟ್ಟನಾರಾಯಣನ ವೇಣೀ ಸಂಹಾರವನ್ನೂ, ಕಾಲಿದಾಸನ ಮಾಲವಿಕಾಗ್ನಿಮಿತ್ರವನ್ನೂ ಕನ್ನಡಕ್ಕೆ ತಂದು ಹೊಸಗನ್ನಡ ಗದ್ಯಶೈಲಿಯನ್ನು ಬೆಳೆಸಲು ತಮ್ಮ ಪರಿಶ್ರಮವನ್ನು ಧಾರೆಯೆರೆದವರು. ಅವರ ಮೇಲಿನ ಕೃತಿಗಳಲ್ಲಿ ಮೃಚ್ಛಕಟಿಕವನ್ನು ಪ್ರಕಾಶಕ ಶಂಭುಲಿಂಗಪ್ಪ ರುದ್ರಪ್ಪ ಕುಲಕರ್ಣಿಯವರು ಆಯ್ದು ಅಂದಿನ ಕನ್ನಡ ಭಾಷೆಯ ಜಾಡು ಉಳಿಯಲೆಂಬ ಅಪೇಕ್ಷೆಯಿಂದ ಅದರ ಪರಿಷ್ಕರಣ ಕಾರ್ಯವನ್ನು ಬೆಟಗೇರಿಯವರಿಗೆ ವಹಿಸಿಕೊಟ್ಟರು. ಬೆಟಗೇರಿಯವರು ಆ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು. ಅನಂತರ ಆ ನಾಟಕವನ್ನು ಪ್ರಕಾಶಕ ಶಂಭುಲಿಂಗಪ್ಪ ರುದ್ರಪ್ಪ ಕುಲಕರ್ಣಿಯವರು ಪ್ರಕಟಿಸಿ ಅಭಿಮಾನ ಧನರಾದರು. ಆ ನಾಟಕದ ಪ್ರಸ್ತಾವನೆಯಲ್ಲಿ (ನಾಂದಿಗೆ ಮೊದಲು) ಬೆಟಗೇರಿಯವರು, ತಾವು ಆ ನಾಟಕವನ್ನು ಪರಿಷ್ಕಾರಗೊಳಿಸಿ ಪ್ರಕಟಿಸುವಾಗ ತಾವು ಸಾಧಿಸಿದ ಧ್ಯೇಯಗಳನ್ನು ಪ್ರಸ್ತಾಪಿಸಿದ್ದಾರೆ. ಆ ಮಾತುಗಳನ್ನು ಇಲ್ಲಿ ಸಂಗ್ರಹಿಸುವುದು ಯೋಗ್ಯವಾಗಿದೆ. "ದಿವಂಗತ ಮುಳಬಾ

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು

### ಅರ್ಜಿತ ಸೇವಾ ವಿವರ

| | | | | | |
|---|---|---|---|---|---|
| 1. | ದರ್ಶನ: | ವಿಶೇಷ ಪ್ರವೇಶ ಪ್ರತಿಯೊಬ್ಬರಿಗೆ | | ರೂ | 2–00 |
| 2. | ಅರ್ಜಿತ: | ಕಾಲಸೋಲ | 1) ಪೊಂಗಲ್ | ರೂ | 55–00 |
| | | | 2) ಪುಳಿಯೋಗರೆ | ರೂ | 50–00 |
| | | | 3) ದಧ್ಯೋದನ | ರೂ | 40–00 |
| | | | 4) ಕೇಸರಿಬಾತ್ | ರೂ | 85–00 |
| | | | 5) ಸಕ್ಕರೆ ಪೊಂಗಲ್ | ರೂ | 65–00 |
| | | | 6) ದೋಸೆ | ರೂ | 35–00 |
| | | | 7) ಶಾಕರಬಾತ್ | ರೂ | 90–00 |
| | | | 8) ಸೀರಾ | ರೂ | 155–00 |
| 3. | ಸೇವೆಗಳು: | | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ | 150–00 |
| | | | 2) ಸಹಸ್ರನಾಮಾರ್ಚನೆ | ರೂ | 6–50 |
| | | | 3) ಅರ್ಚನೆ | ರೂ | 1–00 |
| | | | 4) ಆರತಿ | ರೂ | 0–50 |
| | | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ | 100–00 |
| | | | 6) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | | 7) ತಿರುಚ್ಚಿ ಉತ್ಸವ | ರೂ | 63–00 |
| | | | 8) ಗಜವಾಹನ | ರೂ | 32–00 |

—ಪೇಷ್ಕಾರ್

ಗಿಲ ಅವರ ಮೂಲ ಭಾಷಾಂತರಕ್ಕೆ ಊಜ್ಜುಗೊರಡು ಹೊಡೆದಿರುವೆನು. ಕನ್ನಡ ಸಂಪ್ರದಾಯಕ್ಕೆ ಸರಿಯೆನಿಸುವಂತೆ ವಾಕ್ಯರಚನೆಯನ್ನು ಸರಿಗೊಳಿಸಿರುವೆನು. ಗ್ರಂಥದ ಗಾಂಭೀರ್ಯಕ್ಕೆ ಒಪ್ಪದಂತಹ ಗ್ರಾಮ್ಯ ವಾಕ್ಯಪ್ರಯೋಗಗಳನ್ನು ಇಂದಿನ ನಾಗರಿಕ ಶೈಲಿಗೆ ತಿರುಗಿಸಿರುವೆನು. ಮೂಲ ಸಂಸ್ಕೃತದಲ್ಲಿ ಅನುಸ'ಸಿದ ರೀತಿಯಂತೆ ನಾಗರಿಕ ಗ್ರಾಮ್ಯಕನ್ನಡ ಭಾಷೆಗಳನ್ನು ಪಾತ್ರೋಚಿತವಾಗಿ ಬಳಸಬಹುದಾಗಿತ್ತೆಂದು ಕೆಲವರು ಹೇಳಬಹುದು. ಆದರೆ ವರ್ತಮಾನಕಾಲದ ಗ್ರಾಮ್ಯ ರೀತಿಯ ಭಾಷೆಯನ್ನು ಬಳಸಿದರೆ ಕಥಾವಸ್ತುವಿನ ಕಾಲದ ಪ್ರಾತಿನಿಧ್ಯಕ್ಕೆ ಅದು ಸರಿಯೆನಿಸದೆಂದು ಕಂಡು ಬಂದುದರಿಂದ ಅಂತಹ ಪ್ರಯತ್ನಕ್ಕೆ ನಾನು ಕೈಹಾಕಲಿಲ್ಲ. ನಾಗರಿಕ ಕನ್ನಡ ಗದ್ಯದಲ್ಲಿಯೇ ಪಾತ್ರಗಳ ಸಾಂಸ್ಕೃತಿಕ ತಾರತಮ್ಯ ಕಂಡುಬರುವಂತೆ ಇಲ್ಲಿ ಪ್ರಯತ್ನಮಾಡಿದ್ದೇನೆ. ಸೂಕ್ಷ್ಮ ವಿಮರ್ಶಕರಿಗೆ ಇದರ ಮನವರಿಕೆಯಾಗದಿರದೆಂದು ನನ್ನ ಭಾವನೆ" ಎಂಬುವೇ ಬೆಟಗೇರಿಯವರ ಆ ಮಾತುಗಳು. ಈ ಹಿನ್ನಲೆಯಲ್ಲಿ ಸಂಪಾದನೆಯೆಂದರೆ ಮೂಲಕೃತಿಯ ಸೌಂದರ್ಯವನ್ನು ಹೆಚ್ಚಿಸುವುದೇ ಆಗಿದೆಯೆಂದು ಅವರು ಸಮರ್ಥನೆ ನೀಡಿದ್ದಾರೆ. ಈ ದಿಸೆಯಲ್ಲಿ ಅವರ ಶ್ರಮವು ಸಾರ್ಥಕವಾಗಿದೆ.

ಪುರಂದರ ಸಾಹಿತ್ಯದ ಸಂಪುಟಗಳೆಲ್ಲ ಬರುವ ಮುನ್ನವೇ "ಶ್ರೀ ಕನಕದಾಸರ ಗೀತೆಗಳು" ಸಂಪಾದಿತವಾಗಿ ಹೊರಗೆ ಬಂದಿತು. ದಿವಂಗತ ಗೋರಬಾಳ ಹನುಮಂತರಾಯರ ಸಂಗ್ರಹದಲ್ಲಿದ್ದ ಕೋರಿಕಾಗದದ ಪ್ರತಿ, ಕರ್ನಾಟಕ ವಿಶ್ವವಿದ್ಯಾಲಯದ ತಾಳೆಗರಿ ಪ್ರತಿಗಳು, ಲಕ್ಷ್ಮಣರಾವ್ ಇನಾಂದಾರ ಅವರ ಹತ್ತಿರವಿದ್ದ ಕೋರಿ ಕಾಗದದ ಪ್ರತಿ, ಪಾರ್ವತೀಕರ್ ತಮ್ಮಣ್ಣರಾಯರ ಸಂಗ್ರಹದಲ್ಲಿದ್ದ ಪ್ರತಿಗಳು ಸಂಪಾದಕರಿಗೆ ಅಪೂರ್ವ ಗೀತೆಗಳನ್ನು ಒದಗಿಸಿ ಕೊಟ್ಟವು. ಈ ಸಾಹಿತ್ಯ ಸಂಪಾದನಾ ಕಾರ್ಯದಲ್ಲಿ ಕನಕದಾಸರ ಮತವಿಚಾರ, ದೇಶವಿಚಾರ, ಜೀವಿತ ಕಾಲ, ವಿದ್ಯಾಸಂಸ್ಕಾರ, ಅಂಕಿತವಿಚಾರ – ಈ ಎಲ್ಲ ವಿಷಯಗಳ ಬಗೆಗೂ ಹೊಸ ವಿಚಾರಗಳು ಮೂಡಿಬಂದವು. ಕನಕದಾಸರ ಸಂಗ್ರಹಕ್ಕೆ ಕನಕದಾಸರವೆಂದು ಸೇರಿದ್ದ, ಬೇಲೂರ ವೈಕುಂಠ ದಾಸರ ಹಾಗೂ ಪುರಂದರದಾಸರ ಕೆಲವು ಗೀತೆಗಳು ಪ್ರತ್ಯೇಕವಾದವು. 'ತಿರುಕನ ಕನಸು'ಎಂಬ ಗೀತೆ ಕನಕದಾಸರದಲ್ಲ ಮುಪ್ಪಿನ ಷಡಕ್ಷರಿಯದೆಂದು ತಿಳಿದುಬಂದಿತು. ಈ ಎಲ್ಲ ವಿಷಯಗಳನ್ನು ನಿರೂಪಿಸಿರುವ ಸಂಪಾದಕರ ಮುನ್ನುಡಿಯೇ ಒಂದು ಅರ್ಥಪೂರ್ಣಸಾಹಿತ್ಯಕ ಕಾಣಿಕೆಯಾಗಿದೆ. ಇದು ಕನಕದಾಸರ ೪೦೦ ನೆಯ ವರ್ಷದ ಸಮಾರಂಭಕ್ಕೆ ಸಂಪಾದಕರು ಸಲ್ಲಿಸಿದ ಅಪೂರ್ವಸೇವೆ.

ಅದನ್ನು ಸಮಾಜ ಪುಸ್ತಕಾಲಯದವರು ಗುರುತಿಸಿ ಸಮಯೋಚಿತವಾಗಿ ಪ್ರಕಟಿಸಿ ಧನ್ಯರಾದರು. ಪರಿಶಿಷ್ಟದಲ್ಲಿ ಟಿಪ್ಪಣಿ, ಸಂದರ್ಭಕಥೆ, ಶಬ್ದಾರ್ಥಗಳನ್ನು ಕೊಟ್ಟು ಸಾಮಾನ್ಯ ಓದುಗರಿಗೆ ಗಹನ ವಿಷಯಗಳನ್ನು ಸುಲಭಗೊಳಿಸಿ ಉಪಕಾರಮಾಡಿದ್ದಾರೆ. ಇದು ಸಂಪಾದನಾ ಕೌಶಲದ ಸದಭಿರುಚಿಯನ್ನು ತೋರಿಸುತ್ತದೆ.

ಡಾ॥ ಬೆಟಗೇರಿಯರ ಅತಿಮಹತ್ತ್ವದ ಸಾಹಿತ್ಯಕ ಸಂಪಾದನಾ ಕಾರ್ಯವೆಂದರೆ ಪುರಂದರ ದಾಸರ ಸಾಹಿತ್ಯದ ಆರು ಸಂಪುಟಗಳು. ಅವು ಅವರ ಬಹುಕಾಲದ ತಪಸ್ಸಿನ ಫಲ. ಅಲ್ಲದೆ ಈ ಕಾರ್ಯ ಶಾಸ್ತ್ರೋಕ್ತವಾಗಿಯೂ ಸಂಯೋಜಿತವಾಗಿಯೂ ನಡೆದಿದೆ. ಅಂತೆಯೇ ಈ ಕೃತಿಗಳು ಬಹುಕಾಲ ಅಚ್ಚಳಿಯದೆ ಉಳಿಯುವುದರಲ್ಲಿ ಸಂಶಯವಿಲ್ಲ. ಇಲ್ಲಿ ಅವರೊಂದಿಗೆ ಶ್ರೀ ಬೆಂಗೇರಿ ಹುಚ್ಚೂರಾಯರೂ ಸಂಪಾದನೆಯಲ್ಲಿ ಪಾಲುಗೊಂಡರು, ಡಾ॥ ಕಮಲಾಪುರ ಶಾಂತರಾಯರು ನೆರವು ನೀಡಿದರು.

ಕಾಲನ ದವಡೆಯಲ್ಲಿ ಸಿಕ್ಕು ಸಿಕ್ಕಾಗಿತ್ತು ಪುರಂದರದಾಸರ ಸಾಹಿತ್ಯ. ಈಗ ಅದನ್ನೆಲ್ಲ ಒಟ್ಟುಗೂಡಿಸಿ, ಕಸಕೊಳೆ ಕೇರಿ ತೊಳೆದು ಹಸನುಮಾಡಿ ಶುದ್ಧ ಸ್ವರೂಪದಲ್ಲಿ ಇರಿಸಿಕೊಟ್ಟವರು ಡಾ॥ ಬೆಟಗೇರಿಯವರು ಮತ್ತು ಬೆಂಗೇರಿಯವರು.

ದಾಸಸಾಹಿತ್ಯದ ಸಂಪಾದನಾ ಕಾರ್ಯಕ್ಕೆ ಸಾಹಸ ಮಾಡುವವರಿಗೆ ಕೇವಲ ಸುಂದರವಾದ ಭಾಷೆಯೊಂದಿದ್ದರೆ ಸಾಲದು, ಅದಕ್ಕೂ ಹೆಚ್ಚಾಗಿ ಅವರಿಗೆ ಭಾರತೀಯ ಪುರಾಣವಾಙ್ಮಯದ ಪರಿಚಯ, ದಾಸಸಾಹಿತ್ಯ ಪರಂಪರೆಯ ಸಂಪರ್ಕ, ಜಾನಪದ ಭಾಷೆಯ ಸೊಗಸಿನ ಅರಿವು, ತತ್ತ್ವಶಾಸ್ತ್ರ, ಛಂದಸ್ಸು, ಸಂಗೀತಗಳ ಸಂಪೂರ್ಣ ಜ್ಞಾನ – ಇವುಗಳೆಲ್ಲ ಕರತಲಾಮಲಕವಾಗಿರಬೇಕು. ಎಂದರೆ ಮಾತ್ರ ಸಂಶೋಧನೆ ಸಂಪಾದನೆಗಳು ಸಮೃದ್ಧಿಯನ್ನು ನೀಡಬಲ್ಲವು. ಇಂತಹ ಶ್ರೇಷ್ಠಮಟ್ಟದ ಡಾ॥ ಬೆಟಗೇರಿಯವರು, ಬೆಂಗೇರಿಯವರ ಸಹಕಾರದಲ್ಲಿ ಅತ್ಯಂತ ಸಮರ್ಥ ರೀತಿಯಿಂದ ನಿರ್ವಹಿಸಿ ಕೊಟ್ಟಿದ್ದಾರೆ. ಈ ಮೊದಲು ಸಾಗಿ ಬಂದಿದ್ದ ಸಂಪಾದಿತ ಪುರಂದರ ಸಾಹಿತ್ಯದಲ್ಲಿಯ ಕೊರತೆಗಳನ್ನೆಲ್ಲ ನಿವಾರಿಸಿದ್ದಾರೆ. ಈ ತಳಹದಿಯ ಮೇಲೆ ಶ್ರೀ ಪುರಂದರದಾಸರ ಸಾಹಿತ್ಯವು ಪೂಜಾ ತತ್ತ್ವ, ಆರ್ತಭಾವ, ಮಹಾತ್ಮ್ಯ ಜ್ಞಾನ, ಕೃಷ್ಣ ಲೀಲೆ, ಲೋಕನೀತಿ ಮತ್ತು ಸಂಕೀರ್ಣ ಸಂಗ್ರಹ – ಎಂಬ ಭಾಗಗಳಲ್ಲಿ ತನ್ನ ಸಮಗ್ರತೆಯನ್ನು ಚೊಕ್ಕಾಗಿ ಮೆರೆದು ನಿಂತಿದೆ.

'ಪೂಜಾತತ್ತ್ವ'ವು ದೇವತಾ ತಾರತಮ್ಯ ವಿಚಾರವನ್ನೂ ಶ್ರೀಹರಿಯ ಸರ್ವೋತ್ತಮತ್ವವನ್ನೂ, ದೇವರಿಗೆ ಸಲ್ಲಿಸಬೇಕಾದ ಆಗಮೋಕ್ತ ಸೋಪಚಾರ ಪೂಜಾವಿವರಗಳನ್ನು ಒಳಗೊಂಡ ಪುರಂದರದಾಸರ ಹಾಡು, ಸುಳಾದಿ, ಉಗಾಭೋಗಗಳ ಸಂಗ್ರಹ, ಇದರ ಮುಖಾಂತರ ಪರಮಾತ್ಮನಿಗೆ ಸಂದ ಕನ್ನಡಪೂಜೆಯು ಅಮೋಘವಾದುದು.

'ಆರ್ತಭಾವ'ವು ಜೀವದಲ್ಲಿ ಭಕ್ತಿಬೀಜವು ಅಂಕುರಿಸುವುದರಿಂದ ಹಿಡಿದು ಅದರ ಫಲವನ್ನು ಅದೇ ಜೀವವು ಅನುಭವಿಸುವವರೆಗಿನ ವಿಸ್ತಾರವನ್ನು ತೋರಿಸಿಕೊಡುವ ಪುರಂದರದಾಸರ ಸಾಹಿತ್ಯ ಸಂಗ್ರಹ. ಇಲ್ಲಿ, ಜೀವವು ಭಕ್ತಿಜ್ಞಾನ ಆನಂದದಲ್ಲಿ ತಲ್ಲೀನವಾಗುವವರೆಗಿನ ವಿವಿಧ ಒಳಗುದಿಗಳನ್ನು ಹಿಡಿದಿಡಲಾಗಿದೆ.

'ಮಹಾತ್ಮ್ಯ ಜ್ಞಾನ'ವು ಭಕ್ತಿಜ್ಞಾನಾನಂದದಲ್ಲಿ ತಲ್ಲೀನನಾಗುವ ಸ್ಥಿತಿಗೆ ಬಂದ ಸಾಧಕ ಜೀವಿಯ ಅರಿವಿಗೆ ಮೂಡುವಂತೆ ಪರಮಾತ್ಮನ ಮಹಾತ್ಮ್ಯವನ್ನು ಹಲವಾರು ರೀತಿಗಳಲ್ಲಿ ದಾಸರು ಹೇಳಿದ ಕೃತಿಗಳ ಸಂಗ್ರಹ. ಇಲ್ಲಿ ದಾಸರು ನಿಗಮಾಗಮ ಪುರಾಣಗಳ ತಿರುಳನ್ನೆಲ್ಲ ಕನ್ನಡಕ್ಕಿಳಿಸಿ ಆ ಮುಖಾಂತರ ಸಾಧಕನಿಗೆ ಪರಮಾತ್ಮನ ಮಹಿಮೆಗಳನ್ನು ತಿಳಿಸುವ ಪರಿ ಮೆಚ್ಚುವಂತಹುದು.

'ಕೃಷ್ಣಲೀಲೆ'ಯು ಲೀಲಾವತಾರಿಯಾದ ಶ್ರೀಕೃಷ್ಣನ ಅವತಾರ ಲೀಲೆಗಳನ್ನು ನಿರೂಪಿಸುವ ಭಕ್ತಿಗೀತೆಗಳ ಸಂಕಲನ. ಪುರಂದರದಾಸರ ಇಂಥ ಭಕ್ತಿಗೀತೆಗಳು ಅನಂತವಾಗಿವೆ. ಇವುಗಳನ್ನೆಲ್ಲ ಸೂಕ್ಷ್ಮದೃಷ್ಟಿಯಿಂದ ಗಮನಿಸಿದಾಗ ಅಲ್ಲಿ ಭಾಗವತ ಪರಂಪರೆಯ ಭಕ್ತಿಯ ಮೂಲವಿರುವುದೆಂಬುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಹಾಗೂ ಅಲ್ಲಿ ಬರುವ ವಿಷ್ಣು, ವಿಠಲ, ಕೃಷ್ಣ, ರಂಗ, ವೆಂಕಟ ಮೊದಲಾದ ರೂಪಗಳು ಭಾಗವತ ದೃಷ್ಟಿಯ ಪರಮಾತ್ಮನ ಉಪಾಸನಾಪರಂಪರೆಯ ರೂಪಗಳೆಂದು ನಿಚ್ಚಳವಾಗಿ ತಿಳಿದುಕೊಳ್ಳಬಹುದಾಗಿದೆ. ಅಲ್ಲದೆ ಈ ಪರಂಪರೆಗೆ ಗುರುಪೀಠದಲ್ಲಿರುವವರು ಶ್ರೀಮದಾನಂದತೀರ್ಥರೆಂದು ನೆನೆದುಕೊಂಡು, ಅವರ ದೀಕ್ಷಾಗುರುಗಳಾದ ಅಚ್ಯುತಪ್ರೇಕ್ಷಯತಿಗಳು ಎಂಬುದನ್ನು ಸ್ಮರಿಸಿಕೊಂಡರೆ ದಾಸಪರಂಪರೆಯಲ್ಲಿ ಭಾಗವತ ಭಕ್ತಿಯು ಒಂದಾಗಿ ಬಂದಿರುವುದನ್ನು ಅಲ್ಲಗಳೆಯುವಂತಿಲ್ಲ. ಅದಕ್ಕೆಂದೇ ದಾಸಸಾಹಿತ್ಯದಲ್ಲಿ ಬಾಲಕೃಷ್ಣನ ಲೀಲೆಗಳು ಬಹು ಸುಂದರವಾಗಿ ವರ್ಣಿತವಾಗಿವೆ. ಅದರಲ್ಲಿಯೂ ಪುರಂದರ ದಾಸರು ಈ ವಿಷಯದಲ್ಲಿ ಒಂದು ತೂಕ ಹೆಚ್ಚು. ಅವರು ಬಾಲಕೃಷ್ಣನ ಲೀಲೆಗಳನ್ನು ವರ್ಣಿಸುವುದರ ಜೊತೆಗೆ ಆತನ ಲೌಕಿಕ ಅಲೌಕಿಕ ಲೀಲೆ

( 35 ನೇ ಪುಟ ನೋಡಿ )

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

## 1—11—82 ರಿಂದ 28—2—83 ವರೆಗೆ

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3—00 ರಿಂದ 3—30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3—30 ರಿಂದ 3—45 ವರೆಗೆ ಶುದ್ಧಿ ಇತ್ಯಾದಿ
,, 3—45 ರಿಂದ 4—30 ವರೆಗೆ ತೋಮಾಲಸೇವೆ (ಏಕಾಂತ)
,, 4—30 ರಿಂದ 4—45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4—45 ರಿಂದ 5—30 ವರೆಗೆ ಮೊದಲನೆಯ ಅರ್ಚನೆ
,, 5—30 ರಿಂದ 6—00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6—00 ರಿಂದ 12—00 ವರೆಗೆ ಸರ್ವದರ್ಶನ
ಮಧ್ಯಾಹ್ನ 12—00 ರಿಂದ 1—00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1—00 ರಿಂದ 6—00 ವರೆಗೆ ಸರ್ವದರ್ಶನ
,, 6—00 ರಿಂದ 7—00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 7—00 ರಿಂದ 10—00 ವರೆಗೆ ಸರ್ವದರ್ಶನ
,, 10—00 ರಿಂದ 10—30 ವರೆಗೆ ಶುದ್ಧಿ
10—30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3—00 ರಿಂದ 3—30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3—30 ರಿಂದ 3—45 ವರೆಗೆ ಶುದ್ಧಿ ಇತ್ಯಾದಿ
,, 3—45 ರಿಂದ 4—30 ವರೆಗೆ ತೋಮಾಲಸೇವೆ (ಏಕಾಂತ)
,, 4—30 ರಿಂದ 4—45 ವರೆಗೆ ಕೊಲುವು, ಪಂಚಾಂಗಶ್ರವಣ
,, 4—45 ರಿಂದ 5—30 ವರೆಗೆ ಮೊದಲನೆಯ ಅರ್ಚನೆ
,, 5—30 ರಿಂದ 6—00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6—00 ರಿಂದ 8—00 ವರೆಗೆ ಸಹಸ್ರ ಕಲಶಾಭಿಷೇಕ (ಆರ್ಜಿತ) ಶುದ್ಧಿ, 2ನೇ ಅರ್ಚನೆ.
,, 8—00 ರಿಂದ ರಾತ್ರಿ 6—00 ವರೆಗೆ ಸರ್ವದರ್ಶನ
ರಾತ್ರಿ 6—00 ರಿಂದ 7—00 ವರೆಗೆ ಶುದ್ಧಿ ಇತ್ಯಾದಿ
,, 7—00 ರಿಂದ 10—00 ವರೆಗೆ ಸರ್ವದರ್ಶನ
,, 10—00 ರಿಂದ 10—30 ವರೆಗೆ ಶುದ್ಧಿ
10—30 ರಿಂದ ಏಕಾಂತಸೇವೆ (ಆರ್ಜಿತ)

### ಗುರುವಾರ, ತಿರುಪ್ಪಾವಡ

ಉದಯ 3—00 ರಿಂದ 3—30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3—30 ರಿಂದ 3—45 ವರೆಗೆ ಶುದ್ಧಿ ಇತ್ಯಾದಿ
,, 3—45 ರಿಂದ 4—30 ವರೆಗೆ ತೋಮಾಲಸೇವೆ
,, 4—30 ರಿಂದ 4—45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4—45 ರಿಂದ 5—30 ವರೆಗೆ ಮೊದಲನೆಯ ಅರ್ಚನೆ
,, 5—30 ರಿಂದ 6—00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6—00 ರಿಂದ 8—00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8—00 ರಿಂದ ಸಂಜೆ 5—00 ವರೆಗೆ ಸರ್ವದರ್ಶನ
ಸಂಜೆ 5—00 ರಿಂದ 7—00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 7—00 ರಿಂದ 10—00 ವರೆಗೆ ಪೂಲಂಗಿ ಸರ್ವದರ್ಶನ
,, 10—00 ರಿಂದ 10—30 ವರೆಗೆ ಶುದ್ಧಿ
10—30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3—00 ರಿಂದ 3—30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3—30 ರಿಂದ 5—00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5—00 ರಿಂದ 7—00 ವರೆಗೆ ಅಭಿಷೇಕ (ಆರ್ಜಿತ)
,, 7—00 ರಿಂದ 8—30 ವರೆಗೆ ಸಮರ್ಪಣೆ
,, 8—30 ರಿಂದ 9—30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ
,, 9—30 ರಿಂದ 10—00 ವರೆಗೆ ಬಲಿ, ಶಾತ್ತುಮೊರೆ
,, 10—00 ರಿಂದ ರಾತ್ರಿ 6—00 ವರೆಗೆ ಸರ್ವದರ್ಶನ
ರಾತ್ರಿ 6—00 ರಿಂದ 7—00 ವರೆಗೆ ಶುದ್ಧಿ ಇತ್ಯಾದಿ
,, 7—00 ರಿಂದ 10—00 ವರೆಗೆ ಸರ್ವದರ್ಶನ
,, 10—00 ರಿಂದ 10—30 ವರೆಗೆ ಶುದ್ಧಿ
10—30 ಏಕಾಂತಸೇವೆ

---

ಗಮನಿಕೆ :— 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/— ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/— ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/— ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಉಯ್ಯಾಲೆಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ್ನ 1—00 ರಿಂದ 7—00 ನಡುವೆ ಜರುಗುವುವು.

# ದೇವಾಲಯಗಳು ಹಾಗೂ ಸಂಸ್ಕೃತಿ

ಆದಿಕಾಲದಿಂದ ಮಾನವನು ಸುಖಾಭಿಲಾಷಿ. ಆ ಸುಖವು ಅವನಿಗೆ ಅನಂತವಾದ ಸುಖವಾಗಿರಬೇಕು. ಈ ಸುಖವೆಂಬುದು ಕಾಲಕಾಲಕ್ಕೆ ಭಿನ್ನವಾಗಿರುತ್ತದೆ ಮಾನವನ ಮನಸ್ಸು ಬೆಳೆದಂತೆಲ್ಲ ಸುಖವು ಐಹಿಕವೆಂದೂ ಆಮುಷ್ಮಿಕವೆಂದೂ ಎರಡು ವಿಧವಾದವೆಂದೂ ಅವುಗಳಲ್ಲಿ ಮೊದಲನೆಯದು ಕ್ಷಣಿಕವೆಂದೂ, ಎರಡನೆಯದು ಅನಂತವಾದುದೆಂದೂ ತಿಳಿದಿದ್ದಾನೆ. ಆದರೆ ಎಲ್ಲ ಕಾಲದಲ್ಲಿಯೂ ಇವುಗಳ ರೂಪವು ಎರಡು ರೀತಿಯಾಗಿರುತ್ತವೆ. ಒಂದು ಇಷ್ಟಾರ್ಥ ಪ್ರಾಪ್ತಿ, ಇನ್ನೊಂದು ಅನಿಷ್ಟಾರ್ಥ ನಿವೃತ್ತಿ. ಮನುಷ್ಯನು ದೀರ್ಘಕಾಲದ ಅನುಭವದಿಂದ ಈ ಎರಡೂ ತನ್ನ ಅಧೀನದಲ್ಲಿಲ್ಲವೆಂದೂ ಅದನ್ನು, ಒದಗಿಸುವ ಶಕ್ತಿಯು ತನ್ನಿಂದ ಬೇರೆಯಾದ ಮತ್ತೊಂದು ವಸ್ತುವೆಂದೂ ಅದನ್ನು ಸಂಪೂರ್ಣವಾಗಿ ತೃಪ್ತಿಗೊಳಿಸುವುದರಿಂದ ಮೇಲೆ ನಿರೂಪಿಸಿರುವ ಇಷ್ಟಾರ್ಥಪ್ರಾಪ್ತಿ ಅನಿಷ್ಟಾರ್ಥ ಪರಿಹಾರಗಳು ಸಾಧ್ಯವೆಂದೂ ತಿಳಿದಿದ್ದಾನೆ. ಅಂತಹ ಶಕ್ತಿಯನ್ನು ಅವನು ದೇವರೆಂದು ಕರೆದನು. ಅದರ ತೃಪ್ತಿಗಾಗಿ ಅವನು ಬೇರೆಬೇರೆ ರೀತಿಯಲ್ಲಿ ದುಡಿಯಲು ಮೊದಲುಮಾಡಿದನು. ಅದನ್ನು ಸೇವೆಯೆಂದು ಕರೆದನು. ಈ ಭಾವನೆ ಪ್ರಪಂಚದ ಎಲ್ಲ ಜನಾಂಗಕ್ಕೂ ಸಮಾನವಾದುದಾದರೂ ಸೇವೆಯ ರೂಪರೇಖೆಗಳೂ, ಆಚಾರವಿಚಾರಗಳೂ ಭಿನ್ನಭಿನ್ನವಾಗರುತ್ತವೆ. ಆದುದರಿಂದಲೇ ಪ್ರಪಂಚದ ಆದಿಕಾಲದಿಂದ ಇಲ್ಲಿಯವರೆಗೆ ದೇವರಿಲ್ಲದ ಜನಾಂಗವೇ ಇಲ್ಲ.

ಭಾರತೀಯರಂತೂ ಸಂಪೂರ್ಣವಾಗಿ ದೇವತಾವಲಂಬಿಗಳು. ವೇದಕಾಲದ ಆರ್ಯರು ಪ್ರಕೃತಿಯ ವಿವಿಧ ರೂಪಗಳಾದ ಸೂರ್ಯ, ಚಂದ್ರ, ಅಗ್ನಿ, ವರುಣ, ಉಷಸ್ ಮೊದಲಾದುವುಗಳನ್ನು ದೇವರೆಂದು ಭಾವಿಸಿ ಅವರುಗಳಿಗೆ ಯಜ್ಞಯಾಗಾದಿಗಳ ಮೂಲಕ ಹವಿಸ್ಸುಗಳನ್ನಿತ್ತು ತೃಪ್ತಿಪಡಿಸಿ ಸಂತಾನಾದಿ ಇಷ್ಟಾರ್ಥಪ್ರಾಪ್ತಿಯನ್ನು ರೋಗರುಜಿನಾದಿ ಅನಿಷ್ಟಪರಿಹಾರವನ್ನು ಪಡೆಯುತ್ತಿದ್ದರು. ಆಗ ಇಂದ್ರಿಯಗ್ರಾಹ್ಯವಾದ ಮೂರ್ತಿಪೂಜೆಗಳಿದ್ದಂತೆ ತೋರುವುದಿಲ್ಲ. ಕಾಲಾನುಕಾಲದಲ್ಲಿ ಈ ಪ್ರಕೃತಿ ದೇವತೆಗಳೇ ಸೃಷ್ಟಿ ಸ್ಥಿತಿ ಲಯಾಧಿಕಾರಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರ (ತ್ರಿಮೂರ್ತಿ) ಮೂರ್ತರೂಪವನ್ನು ಪಡೆದಿರಬೇಕು ಇದೇ ಕಾಲದಲ್ಲಿಯೇ ನಾಸ್ತಿಕಮತಗಳಾದ ಬೌದ್ಧ ಜೈನ ಪಂಥಗಳೂ ತಮ್ಮ ಆರಾಧ್ಯದೈವಗಳ ಮೂರ್ತರೂಪವನ್ನು ಕಲ್ಪಿಸಿಕೊಂಡಿರಬೇಕು. ಈ ಮೂರ್ತರೂಪಗಳ ದೇವತಾಪೂಜೆಯಾರಂಭವಾದಾಗಲೇ ಅವುಗಳು ಸರ್ವದಾ ದೃಷ್ಟಿಗೋಚರವಾಗುವಂತೆ ಅವುಗಳನ್ನು ನಿವಾಸಸ್ಥಾನಗಳಲ್ಲಿ ಪ್ರತಿಷ್ಠಿಸಲು ಪ್ರಯತ್ನಗಳು ನಡೆದಿರಬೇಕು. ಈ ನಿವಾಸಸ್ಥಾನಗಳೇ ದೇವಾಲಯಗಳು.



ದೇವತಾಮೂರ್ತಿಗಳು ಅನಂತವಾದುವು. ಅದರಲ್ಲಿಯೂ ಭಾರತದಲ್ಲಿ ಕಂಡು ಬರುವ ಮೂರ್ತಿಗಳ ವೈವಿಧ್ಯವು ಪ್ರಪಂಚದ ಮತ್ತಾವ ಭಾಗಗಳಲ್ಲಿಯೂ ಇಲ್ಲ. ಇದಕ್ಕೆ ಕಾರಣವಿಲ್ಲದಿಲ್ಲ. ದೇವರು ಮನುಷ್ಯನನ್ನು ಸೃಷ್ಟಿಸುವನೆಂಬುದು ಎಷ್ಟುಸತ್ಯವೋ ಮನುಷ್ಯನು ತನ್ನ ದೇವರನ್ನು ಸೃಷ್ಟಿಸಿಕೊಳ್ಳುತ್ತಾನೆಂಬುದೂ ಅಷ್ಟೇ ಸತ್ಯ. ಭಾರತದ ಪ್ರತಿಯೊಂದು ದಿವ್ಯಕ್ಷೇತ್ರದ ದೇವತೆಯೂ ಯಾವುದೋ ಭಕ್ತನಿಗೆ ಪ್ರತ್ಯಕ್ಷವಾದ ರೂಪದಲ್ಲಿ ಪ್ರತಿಷ್ಠಿತವಾಗಿದೆ. ಭಕ್ತನು ತನ್ನ ಇಷ್ಟಾರ್ಥಪ್ರಾಪ್ತಿಗೋ ಅನಿಷ್ಟಪರಿಹಾರಕ್ಕೋ ಪ್ರಾರ್ಥಿಸಿಕೊಂಡ ರೂಪದಲ್ಲಿ ದೇವರು ಅವನಿಗೆ ಪ್ರತ್ಯಕ್ಷನಾಗಿದ್ದಾನೆ. ಭಗವದ್ಗೀತೆಯಲ್ಲಿ ಉಕ್ತವಾಗಿರುವಂತೆ ಭಕ್ತನು ಪ್ರಾರ್ಥಿಸಿಕೊಂಡ ರೂಪದಲ್ಲಿ ಭಗವಂತನು ಪ್ರತ್ಯಕ್ಷನಾಗುತ್ತಾನೆ. ಅದಕ್ಕನುಗುಣವಾಗಿಯೇ ದೇವತೆಗಳ ಕೈ, ತಲೆ, ಆಯುಧಗಳಿಂದ ಕೂಡಿ ಸೌಮ್ಯ ಭಯಂಕರ ವಿವಿಧ ರೂಪಗಳಲ್ಲಿ ತೋರ್ಪಡಿಸಿಕೊಂಡಿದ್ದಾನೆ. ಇವೆಲ್ಲದರಲ್ಲಿಯೂ ಭಕ್ತನಿಗೆ ಅತ್ಯಂತ ಭಕ್ತಿವಿಶ್ವಾಸಗಳಿರುತ್ತವೆ. ಅವುಗಳಿಗೆ ಭಕ್ತನು ತನ್ನ ಸರ್ವಸ್ವವನ್ನೂ ದಾನಮಾಡುತ್ತಾನೆ.

ದೇವಾಲಯ ನಿರ್ಮಾಣ ಕಾರ್ಯವು ಬಹು ಪುಣ್ಯಫಲಪ್ರದವಾದುದು. ಅದೊಂದು ಧರ್ಮಕಾರ್ಯ. ಇಹಪರಗಳ ಸೌಖ್ಯಕ್ಕೆ ಕಾರಣವಾದುದು. ಅದಕ್ಕಾಗಿಯೇ ರಾಜಾಧಿರಾಜರು, ರಾಣಿಯರು, ಸಾಮಂತರು, ದಂಡನಾಯಕರು, ಶ್ರೀಮಂತರೂ, ವರ್ತಕ ಸಂಸ್ಥೆಗಳವರೂ ಅನೇಕ ದೇವಾಲಯಗಳನ್ನು ನಿರ್ಮಿಸಿದ್ದಾರೆ.

ದೇವಾಲಯದ ಮುಖ್ಯ ಭಾಗಗಳು :— ದೇವಾಲಯದ ಮುಖ್ಯಭಾಗ ಗರ್ಭಗೃಹ. ಇದು ಪ್ರಾರಂಭದಲ್ಲಿ ಚತುರಸ್ರಾಕಾರವಾಗಿದ್ದು ಕಾಲಾನುಕಾಲದಲ್ಲಿ ದೀರ್ಘಚತುರಸ್ರ, ಗಜಪೃಷ್ಠಾಕಾರ, ನಕ್ಷತ್ರಾಕಾರಗಳನ್ನು ತಾಳಿದೆ. ಇದಕ್ಕೆ ಮುಖ್ಯ ದ್ವಾರ ವಿನಾ ಮತ್ತಾವ ಬೆಳಕು ಬರುವ ರಂಧ್ರಗಳೂ ಇರುವುದಿಲ್ಲ. ಕತ್ತಲೆಯಾಗಿಯೇ ಇರುತ್ತದೆ. ಇದರ ಮಧ್ಯಭಾಗದಲ್ಲಿ ಮೂಲವಿಗ್ರಹ ಪ್ರತಿಷ್ಠಿತವಾಗಿರುತ್ತದೆ ಶಿವಾಲಯಗಳಾದರೆ ಅಲ್ಲಿ ಲಿಂಗಗಳಿರುತ್ತವೆ. ಇದರ ಮೇಲ್ಚಾವಣಿಯ ಮೇಲೆ ಸಣ್ಣ ಗೋಪುರವಿರುತ್ತದೆ. ಇದಕ್ಕೆ ವಿಮಾನವೆಂದು ಹೆಸರು. ಅನೇಕ ಮುಖ್ಯದೇವಾಲಯಗಳಲ್ಲಿ ಈ ವಿಮಾನಕ್ಕೆ ತಗಡು ಹೊದಿಸಿ ಸುವರ್ಣಲೇಪನ ಮಾಡಿರುತ್ತದೆ. ಈ ಗೋಪುರಗಳು ಉತ್ತರಭಾರತದಲ್ಲಿ ಎತ್ತರವಾಗಿಯೂ ದಕ್ಷಿಣದಲ್ಲಿ ಕುಳ್ಳಾಗಿಯೂ ಇರುತ್ತವೆ.

---

**ಡಾ॥ ಎನ್. ಅನಂತರಂಗಾಚಾರ್**

---

ಗರ್ಭಗೃಹಕ್ಕೆ ಸೇರಿದ ಹಾಗೆ ಮುಖಮಂಟಪವಿರುತ್ತದೆ. ಇದಕ್ಕೆ ಸುಖನಾಸಿ ಅಥವಾ ಅರ್ಧಮಂಟಪವೆಂಬ ಹೆಸರೂ ಉಂಟು. ಇದು ಗರ್ಭಗೃಹಕ್ಕೆ ಸೇರಿದ ಹಾಗಿರುವುದಲ್ಲದೆ ಮೂಲ ಮೂರ್ತಿಗೆ ಸೇರಿದ ಪದಾರ್ಥಗಳನ್ನು ಇಡುವ ಸ್ಥಳವೂ ಆಗಿದೆ. ಮುಂದೆ ಅಂತರಾಳವಿರುತ್ತದೆ. ಇದು ಗರ್ಭಗೃಹ ಸುಖನಾಸಿಗಳನ್ನು ಮುಂದಿನ ಮಂಟಪಕ್ಕೆ ಕೂಡಿಸುವ ಭಾಗ. ಅನೇಕ ಸ್ಥಳದಲ್ಲಿ ಇದು ಪ್ರತ್ಯೇಕವಾಗಿರುವುದಿಲ್ಲ. ಮುಂದಿನ ಮಂಟಪಕ್ಕೆ ನೃತ್ಯರಂಗ ಅಥವಾ ನವರಂಗವೆಂದು ಹೆಸರು. ಇದು ಭಕ್ತಾದಿಗಳು ನೆರೆಯುವ ಸ್ಥಳ. ವೇದಪಾರಾಯಣ, ಸಂಗೀತ, ನಾಟ್ಯಗಳು ಇಲ್ಲಿ ನಡೆಯುತ್ತವೆ. ದೇವಸ್ಥಾನಕ್ಕೆ ಸಂಬಂಧಪಟ್ಟ ಎಲ್ಲ ಧರ್ಮಕಾರ್ಯಗಳೂ ಇಲ್ಲಿಯೇ ನಡೆಯುವುವು. ಇವುಗಳ ಮುಂದೆ ಧ್ವಜಸ್ತಂಭವಿರುತ್ತದೆ. ಭಗವಂತನ ಧ್ವಜವನ್ನು ಹಾರಿಸುವ ಸ್ಥಳವಿದು. ಇಲ್ಲಿ ಸಂಪ್ರದಾಯಾನುಸಾರವಾಗಿ ಆಯಾ ಚಿಹ್ನೆಗಳಿರುತ್ತವೆ. ಶಿವಾಲಯದಲ್ಲಿ ನಂದಿಯೂ ವಿಷ್ಣುದೇವಾಲಯದಲ್ಲಿ ಗರುಡನೂ ವಿಶೇಷವಾಗಿರುವ ಧ್ವಜಚಿಹ್ನೆಗಳು. ಈ ಧ್ವಜಸ್ತಂಭಗಳು, ಕಲ್ಲು, ಮರ, ಅಥವಾ ಲೋಹಗಳಿಂದ ಮಾಡಲ್ಪಟ್ಟಿರುತ್ತವೆ. ಕೆಲವು ದೇವಾಲಯಗಳ ಮುಂದೆ ಬಹು ಎತ್ತರವಾದ ಕಲ್ಲಿನ ಧ್ವಜಸ್ತಂಭಗಳಿರುತ್ತವೆ. ಉತ್ತರ ಕರ್ನಾಟಕದ ಸ್ವಾದಿ ಎಂಬೆಡೆಯಲ್ಲಿ ೮೦ ಅಡಿ ಎತ್ತರದ ಕಲ್ಲಿನ ಧ್ವಜಸ್ತಂಭವಿದೆ. ಪ್ರಾಕಾರಗಳು ಹೆಚ್ಚಿದಂತೆಲ್ಲ ಧ್ವಜಸ್ತಂಭಗಳು ಹೆಚ್ಚಿರುವುದುಂಟು.

ಮುಂದೆ ಇರುವುದು ಬಲಿಪೀಠ, ಇದು ಪದ್ಮಾಕಾರವಾಗಿರುತ್ತದೆ. ಇವುಗಳ ಮೇಲೆ ದೇವತಾ ಚಿಹ್ನೆಗಳಿರುತ್ತವೆ. ನಿತ್ಯ ನೈಮಿತ್ತಿಕ ಪೂಜಾಕಾಲಗಳಲ್ಲಿ ಇದರ ಮೇಲೆ ದೇವಾಲಯದ ಪರಿವಾರ ದೇವತೆಗಳಿಗೆ ಹರಿದ್ರಾಕುಂಕುಮ ಮಿಶ್ರವಾದ ಬಲಿದಾನ ಮಾಡುತ್ತಾರೆ. ವೇದಕಾಲದ ಯೂಪಸ್ತಂಭವೇ ಮುಂದಿನ ಧ್ವಜಸ್ತಂಭಗಳಾಗಿ ಮಾರ್ಪಟ್ಟಿರಬೇಕೆಂದು ತಜ್ಞರ ಅಭಿಪ್ರಾಯ.

ದೇವಾಲಯಗಳು ವಿಸ್ತಾರವಾದಂತೆಲ್ಲ ಅದು ಪ್ರಾಕಾರಗಳಿಂದ ಸುತ್ತುವರಿಯಲ್ಪಟ್ಟಿರುತ್ತವೆ. ಕೆಲವು ಪ್ರಾಕಾರಗಳು ೩೫ ಅಡಿಯಷ್ಟು ಎತ್ತರವಾಗಿರುತ್ತವೆ. ಬೇರೆಬೇರೆ ದೇವಾಲಯಗಳಲ್ಲಿ ಒಂದರಿಂದ ಏಳು ಪ್ರಾಕಾರಗಳೂ ಇರುತ್ತವೆ. ಒಂದೊಂದು ಪ್ರಾಕಾರಕ್ಕೂ ಒಂದರಿಂದ ಮೂರು ದ್ವಾರಗಳಿರುತ್ತವೆ. ಆ ಮಹಾದ್ವಾರದ ಮೇಲೆ ಉನ್ನತ ಗೋಪುರಗಳಿರುತ್ತವೆ. ಮುಂಚಿನ ಗೋಪುರಕ್ಕೆ ರಾಯಗೋಪುರವೆಂದು ಹೆಸರು. ಶ್ರೀರಂಗದಲ್ಲಿ ೨೧ ಗೋಪುರಗಳಿವೆ. ಮಧುರೆಯಲ್ಲಿ ೯ ಗೋಪುರಗಳಿವೆ. ಮನ್ನಾರ್ ಗುಡಿಯಲ್ಲಿ ೧೬ ಗೋಪುರಗಳಿವೆ. ಕಂಚಿಯ ಏಕಾಂಬರೇಶ್ವರ ದೇವಾಲಯದ ಗೋಪುರ ೧೮೦ ಅಡಿ ಎತ್ತರವಾಗಿದೆ. ತಂಜಾವೂರಿನ ಬೃಹದೀಶ್ವರ ದೇವಾಲಯದ ಗೋಪುರ ೨೧೬ ಅಡಿ ಎತ್ತರವಿದೆ. ಕುಂಭಕೋಣದ ಶಾರ್ಙ್ಗಪಾಣಿಯ ದೇವಾಲಯದ ಗೋಪುರ ೧೪೭ ಅಡಿ ಎತ್ತರವಿದೆ. ಹಂಪೆಯ ವಿರೂಪಾಕ್ಷ ದೇವಾಲಯದ ಗೋಪುರ ೧೦೦ ಅಡಿ ಎತ್ತರವಿದೆ. ಇವುಗಳಲ್ಲಿ ೧೩ ರವರೆಗಿನ ಅಂತಸ್ತುಗಳಿವೆ.

ಪ್ರಾಕಾರದ ಒಳಗಡೆ ಉಪದೇವತೆಗಳ ಗುಡಿಗಳಿರುತ್ತವೆ. ಅವು ಮೂಲ ದೇವರ ಗುಂಪಿಗೇ ಸೇರಿದವು. ಶಿವಾಲಯಗಳಲ್ಲಿ ಗಣಪತಿ, ಸುಬ್ರಹ್ಮಣ್ಯ, ಚಂಡಿಕೇಶ್ವರ, ಪಾರ್ವತಿ, ನಾಯನಾರು, ಪುರಾತನರ ಗುಡಿಗಳೂ ವಿಷ್ಣುವಾಲಯಗಳಲ್ಲಿ ಲಕ್ಷ್ಮಿ, ಹನುಮಂತ, ಗರುಡ, ಆಳ್ವಾರಾಚಾರ್ಯರುಗಳ ಸನ್ನಿಧಿಗಳೂ ಇರುತ್ತವೆ.

ಇವುಗಳಲ್ಲದೆ ದೇವಾಲಯಗಳಲ್ಲಿ ಯಾಗಶಾಲೆ, ಪಾಕಶಾಲೆ, ಉತ್ಸವಬೇರಗಳ ಸನ್ನಿಧಿ, ಪುಷ್ಕರಿಣಿ, ಉದ್ಯಾನ, ಉಗ್ರಾಣ ಮುಂತಾದವು ಇರುತ್ತವೆ. ಅನೇಕ ಶಿವಾಲಯಗಳ ಮುಂದೆ ನಂದಿಯ ವಿಗ್ರಹವೂ ದೀಪಸ್ತಂಭವೂ ಇರುವುದುಂಟು.

ಭಾರತದಲ್ಲಿ ಮೂರ್ತಿಶಿಲ್ಪವು ಬಹಳ ಹಿಂದಿನ ಕಾಲದಿಂದಲೂ ಪ್ರಸಿದ್ಧಿಯಾಗಿದೆ. ಋಗ್ವೇದದಲ್ಲಿ ಮೂರ್ತಿಗಳಿಗೂ ಅಥರ್ವವೇದದಲ್ಲಿ ದೇವಾಲಯಗಳಿಗೂ ಸೂಚನೆಯಿದೆ. ಪುರಾಣಾಗಮಗಳಲ್ಲಿ ಅವುಗಳ ಸ್ಪಷ್ಟ ವಿವರಣೆಯಿದೆ.

ಹಿಂದೂ ವಿಗ್ರಹಗಳು ಮೂರು ವಿಧವಾಗಿರುತ್ತವೆ. ಶೈವ, ವೈಷ್ಣವ ಮತ್ತು ಶಾಕ್ತ ಎಂಬುವೇ ಅವು. ಅವು ಅಚಲ ಅಥವ ಧ್ರುವ ಮತ್ತು ಚರ ಬೇರಗಳಾಗಿ ವಿಂಗಡವಾಗಿವೆ. ಧ್ರುವ ಬೇರಗಳು ಸಾಮಾನ್ಯವಾಗಿ ಶಿಲಾರೂಪದಲ್ಲಿ ಪ್ರತಿಷ್ಠಿತವಾಗಿರುತ್ತವೆ. ಚರಬೇರಗಳು ಲೋಹ ನಿರ್ಮಿತವಾಗಿ ಉತ್ಸವಾದಿಗಳಿಗೆ ಉಪಯೋಗಿಸಲ್ಪಡುವುವು. ಪುರಿಯಂತಹ ಸ್ಥಳಗಳಲ್ಲಿ ಚಲ ಮತ್ತು ಅಚಲ ಮೂರ್ತಿಗಳು ಏಕರೂಪವಾಗಿ ದಾರುಮಯವಾಗಿರುವುದುಂಟು. ಪುನಃ ಅವು ಸ್ಥಾನಕ ಆಸೀನ ಮತ್ತು ಶಯನರೂಪಗಳಾಗಿ ಕಾಣಬಹುದು.

ಮೂರ್ತಿಗಳನ್ನು ಮುದ್ರ, ಆಸನ, ಚಿಹ್ನ, ವಸನ ಮತ್ತು ಆಭರಣಗಳಿಂದ ಗುರುತಿಸಬಹುದು. ಮುದ್ರೆಗಳಲ್ಲಿ ಅಭಯ ಮುದ್ರೆ ಮತ್ತು ವರದ ಮುದ್ರೆಗಳೂ ಆಸನಗಳಲ್ಲಿ ಪದ್ಮಾಸನ ಮತ್ತು ಯೋಗಾಸನಗಳೂ ಪ್ರಧಾನವಾದುವು. ಶೈವ ಮತ್ತು ಶಾಕ್ತ ವಿಗ್ರಹಗಳಲ್ಲಿ ಡಮರು, ತ್ರಿಶೂಲ, ಪಾಶ, ಅಂಕುಶ, ಬಾಣ, ಖಡ್ಗ, ಮೊದಲಾದ ಚಿಹ್ನೆಗಳಿರುತ್ತವೆ. ಶಂಖ ಚಕ್ರ ಗದಾಪದ್ಮಗಳು ವೈಷ್ಣವ ಚಿಹ್ನೆಗಳು. ವಸನ ಮತ್ತು ಆಭರಣಗಳು ವಿವಿಧವಾಗಿರುತ್ತವೆ.

ಮೂರ್ತಿ ಶಿಲ್ಪ ಮತ್ತು ವಾಸ್ತು ಶಿಲ್ಪಗಳ ವಿಷಯವಾಗಿ ಅಮೋಘವಾದ ಶಾಸ್ತ್ರರಾಶಿ ಬೆಳೆದಿದೆ. ದೇವಾಲಯಗಳ ನಿರ್ಮಾಣದಲ್ಲಿ ಕಾಲಮಾನ ವ್ಯವಸ್ಥೆ ಬಹು ನಿಖರವಾಗಿದೆ. ಇವುಗಳ ಆಧಾರದ ಮೇಲೆ ಶಿಲ್ಪಿಗಳು ತಮ್ಮ ಪ್ರತಿಭಾ ಶಕ್ತಿಯಿಂದ ಬಹು ಸುಂದರ ವಿಗ್ರಹಗಳನ್ನು ರಚಿಸಿದ್ದಾರೆ. ಶಿಲ್ಪಶಾಸ್ತ್ರದಲ್ಲಿ ಕ್ರಿ.ಶ. ೬ – ೭ ನೆಯ ಶತಮಾನದಲ್ಲಿ ಸಂಕಲಿತವಾದ 'ಮಾನಸಾರ' ಬಹು ಪ್ರಖ್ಯಾತವಾದದು.

ದೇವಾಲಯಗಳಿಗೆ ಸಂಬಂಧಿಸಿದಂತೆ ಅನೇಕ ವಿಧಿಗಳು ಏರ್ಪಟ್ಟಿವೆ. ಅವುಗಳಲ್ಲಿ ಪ್ರತಿಷ್ಠಾವಿಧಿ, ನಿತ್ಯ ಪೂಜಾವಿಧಿ, ನೈಮಿತ್ತಿಕ ಪೂಜಾವಿಧಿ, ಬ್ರಹ್ಮೋತ್ಸವವಿಧಿ ಇವು ಮುಖ್ಯವಾದುವು. ಇವುಗಳಲ್ಲಿ ಬ್ರಹ್ಮೋತ್ಸವ ಅಥವಾ ರಥೋತ್ಸವವು ಬಹು ಪ್ರಸಿದ್ಧವಾದದ್ದು. ಈ ಉತ್ಸವವು ಸುಮಾರು ೯ ದಿನಗಳು ನಡೆಯುವುದು. ಇವುಗಳಿಂದ ಜನರ ಮೇಲೆ ವಿಶೇಷ ಪರಿಣಾಮವುಂಟಾಗಿದೆ. ರಥಶಿಲ್ಪವೇ ಪ್ರತ್ಯೇಕ ಕಲೆಯಾಗಿ ಬೆಳೆದಿದೆ. ರಥವು ದೇವಾಲಯದ ಸಂಕೇತ. ಜನಗಳ ಪರಸ್ಪರ ಸೌಹಾರ್ದದ ಬೆಳವಣಿಗೆಗೆ ಪ್ರಧಾನ ಸಾಧನವಾಗಿದೆ. ಇದು ದೇವಾಲಯಕ್ಕೆ ಹೋಗದವರಿಗಾಗಿ ಏರ್ಪಡಿಸಿರುವ ಅದ್ದೂರಿಯ ದೇವರ ದರ್ಶನ.

ಈ ವಿಧಿಗಳು ವೈಖಾನಸ, ಪಾಂಚರಾತ್ರ, ಶೈವಾಗಮಗಳನುಸಾರ ನಿಷ್ಕರ್ಷವಾಗಿವೆ. ಮೊದಲೆರಡು ಆಗಮಗಳು ವೈಷ್ಣವಾಲಯಗಳಲ್ಲಿಯೂ ಮೂರನೆಯದು ಶಿವಾಲಯಗಳಲ್ಲಿಯೂ ಅನುಸರಿಸಲ್ಪಡುವುವು. ತಂತ್ರಸಾರ ಪದ್ಧತಿಯ ಪೂಜಾವಿಧಿಯೂ ಉಂಟು.

ದೇವಾಲಯಗಳು ಮನುಷ್ಯ ಮತ್ತು ದೈವ, ಇಹ–ಪರ–ವಾಸ್ತವಿಕ ಮತ್ತು ಆದರ್ಶಗಳ ಮೇಳನದ ಸಂಕೇತವಾಗಿರುತ್ತವೆ. ದೇವಾಲಯವೆಂದರೆ ದೇವರು ವಾಸಮಾಡುವ ಸ್ಥಳ. ಲೋಕ ಸಂರಕ್ಷಣೆಗಾಗಿ ಭಗವಂತನು ಭೂಮಿಯಲ್ಲಿ ನೆಲಸಿರುವ ಸ್ಥಳ. ಇದಕ್ಕೆ ಪ್ರಾಸಾದವೆಂದು ಹೆಸರು, ಅರಮನೆ ಎಂದರ್ಥ, ಅದು ಬಹು ಸುಂದರವಾಗಿರತಕ್ಕದ್ದು. ಧ್ವಜಸ್ತಂಭವು ಆ ದೇವರ ಸಂಕೇತವನ್ನು ಪ್ರದರ್ಶನ ಮಾಡುವ ಕಂಭ, ಗೋಡೆಗಳೂ ಪ್ರಾಕಾರಗಳೂ ದೇವಾಲಯದ ಕೋಟೆಯ ಗೋಡೆಗಳು. ಗೋಪುರವು ಅದರ ಮಹಾದ್ವಾರ, ದೇವಾಲಯಕ್ಕೆ ವಿಮಾನವೆಂದು ಹೆಸರು. ಅದು ಒಳಗೆ ನೆಲಸಿರುವ ಭಗವಂತನ ಆಕಾಶಯಾನ.

ಆಧ್ಯಾತ್ಮ ದೃಷ್ಟಿಯಿಂದ ಜೀವಾತ್ಮರು ತಮ್ಮ ನಿಜಸ್ಥಾನವನ್ನು ತಲುಪುವುದೇ ಜಗತ್ಸೃಷ್ಟಿಯ ಪರ ಮೋದ್ದೇಶ. ಪರಮಾತ್ಮನನ್ನಗಲಿ ದೂರ ಸರಿದು ಬಂದಿರುವ ಜೀವನು ಪರಮಾತ್ಮನ್ನು ಸೇರಬೇಕು. ಇದಕ್ಕಾಗಿಯೇ ಶರೀರೇಂದ್ರಿಯಗಳು ಸೃಷ್ಟಿಯಾಗಿ ರುವುವು. ಈ ಪರಮೋದ್ದೇಶಗಳಿಗಾಗಿಯೇ ಇವು ಗಳನ್ನು ಉಪಯೋಗಿಸಬೇಕು. ಕುಲಶೇಖರಾಳ್ವಾ ರವರು ಈ ವಿಷಯವನ್ನು ಮುಂದಿನ ಶ್ಲೋಕ ದಲ್ಲಿ ವಿವರಿಸಿದ್ದಾರೆ.

ಜಿಹ್ವೇಕೀರ್ತಯ ಕೇಶವಂ,
ಮುರರಿಪುಂ ಚೇತೋಭಜ, ಶ್ರೀಧರಂ
ಪಾಣಿದ್ವಂದ್ವ ಸಮರ್ಚಯ, ಅಚ್ಯುತಕಥಾ
ಶ್ರೋತ್ರ ದ್ವಯಂ ತ್ವಂ ಶೃಣ
ಕೃಷ್ಣಂಲೋಕಯ ಲೋಚನದ್ವಯ,
ಹರೇರ್ಗಚ್ಛಾಂಘ್ರಿಯುಗ್ಮಾಲಯಂ
ಜಿಘ್ರ ಘ್ರಾಣ ಮುಕುಂದಪಾದತುಳಸೀಂ,
ಮೂರ್ಧನ್ನಮಾಧೋಕ್ಷಜಂ !

ಇಷ್ಟು ಮಾತ್ರವಲ್ಲದೆ ವಿಶ್ವವೆಲ್ಲವೂ ಭಗವಂತನ ವಿಭೂತಿಯೆಂಬ ಭಾವನೆ ಮಾನವನಿಗೂ ಪರಮಾ ತ್ಮನಿಗೂ ಇರುವ ದೂರವನ್ನು ಕಡಿಮೆ ಮಾಡುವು ದರಲ್ಲಿ ಬಹಳ ಸಹಾಯವಾಗುತ್ತದೆ. ಪರಮಾ ತ್ಮನ ವಿಭೂತಿಯನ್ನು ಅವನ ವೈಭವವನ್ನು ಕಂಡರೆ ಭಕ್ತನಿಗೆ ಅತ್ಯಾಂತಾನಂದವುಂಟಾಗುತ್ತದೆ. ಈ ತತ್ತ್ವವನ್ನು ಸಾಕ್ಷಾತ್ಕರಿಸುವುದಕ್ಕೆ ದೇವಾಲ ಯಗಳು ಪರಮ ಸಾಧನಗಳಾಗುವುವು. ಇಲ್ಲಿಯ ಆರಾಧನೆ ಅಲ್ಲಿಯ ಆರಾಧನೆಗೆ ಅಭ್ಯಾಸಮಾತ್ರ, ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು. ಇಲ್ಲಿಯ ದೇವಾಲಯಗಳು ವೈಕುಂಠ ಕೈಲಾಸಗಳ ಪ್ರತೀಕ.

ಹಿಂದೂಧರ್ಮದಲ್ಲಿ ಯಾತ್ರೆಗಳಿಗೆ ವಿಶೇಷ ಸ್ಥಾನ, ಯಾತ್ರಾಸ್ಥಳಗಳಿಗೆ ತೀರ್ಥಗಳೆಂದು ಹೆಸರು. ಇವು ದೇವಾಲಯಗಳೊಂದಿಗೆ ಅವಿನಾ ಭಾವವನ್ನು ಪಡೆದಿರುತ್ತವೆ. ತೀರ್ಥಯಾತ್ರೆ ಸಂ ಸಾರ ದುಃಖವನ್ನು ಕಡೆಗಾಣಿಸುವ ಸುಲಭೋ ಪಾಯ.

ದೇವಾಲಯಗಳ ನಕ್ಷೆ ಮತ್ತು ರಚನಾಕ್ರ ಮವೂ ಸಾಂಕೇತಿಕವಾಗಿವೆ ಚತುರಸ್ರಾಕಾರ ವಾದ ಅದರ ಗರ್ಭಗೃಹವು ಶಿರಸ್ಸು, ಗೋಪುರ ಗಳು ಪಾದಗಳು. ಇತರ ಭಾಗಗಳು ಭಗವಂತನ ಇತರ ಅವಯಗಳು. ಸುಖನಾಸಿ ನಾಸಿಕ, ಅಂತ ರಾಳ ಗ್ರೀವ ಅಥವಾ ಕತ್ತು, ಅನೇಕಮಂಟಪ ಗಳು ಶರೀರ. ಪ್ರಾಕಾರಾದಿಗಳು ಹಸ್ತಗಳು. ಇದನ್ನೇ ಊರ್ಧ್ವ ದೃಷ್ಟಿಯಿಂದ ಹೇಳುವುದಾದರೆ ಗರ್ಭಗೃಹ ಕತ್ತು. ಅದರ ಮೇಲಿನ ಶಿಖರ ತಲೆ. ಕಲಶಗಳು ತಲೆಯ ಕೂದಲು – ಇತ್ಯಾದಿ.

ದೇವಾಲಯಗಳನ್ನು ಅನೇಕ ಲೋಕಗಳಿಂದ ಕೂಡಿದ ವಿಶ್ವದ ಪ್ರತೀಕವಾಗಿಯೂ ಭಾವಿಸುವು ದುಂಟು. ಮೂಲ ಮೂರ್ತಿಯ ಪಾದವು ಭೂ ಲೋಕ, ತಲೆಯು ಸತ್ಯಲೋಕ, ಇತರ ಭಾಗಗಳು ಇತರ ಲೋಕಗಳೊಡನೆ ಸಮನ್ವಯ. ದೇವಾ ಲಯಗಳು ಮೇರುಪರ್ವತದ ಪ್ರತಿನಿಧಿಯೆಂದೂ ಮನುಷ್ಯನ ಶರೀರದ ವಿವಿಧ ಭಾಗಗಳ ಪ್ರತೀಕ ವೆಂದೂ ಭಾವಿಸುವುದುಂಟು.

ದೇವಾಲಯಗಳು ಎಂದು ಹೇಗೆ ಅಸ್ತಿತ್ವಕ್ಕೆ ಬಂದುವೆಂಬುದು ಊಹೆಗೆ ಬಿಟ್ಟ ವಿಷಯ. ವೇದ ಕಾಲದಲ್ಲಿ ದೇವಾಲಯಗಳಿದ್ದಂತೆ ಕಾಣುವುದಿಲ್ಲ. ದೇವಮೂರ್ತಿಗಳನ್ನು ಕಲ್ಪಿಸಿ ಪೂಜೆಮಾಡುವ ಅಭ್ಯಾಸವು ವೇದಗಳ ಅಂತ್ಯಕಾಲದಲ್ಲಿ ರೂಢಿಗೆ ಬಂದಿರಬೇಕು. ವೇದಕಾಲದ ಯಾಗಶಾಲೆಗಳೇ ಮುಂದೆ ಭಕ್ತಿಪಂಥದ ಪ್ರಭಾವದಿಂದ ದೇವಾಲ ಯಗಳಾಗಿ ಮಾರ್ಪಟ್ಟಿರಬೇಕೆಂದು ಬಹುಜನಾ ಭಿಪ್ರಾಯ.

ಆದಿಕಾಲದ ಕಟ್ಟಡಗಳೆಲ್ಲ ಬಹು ಬೇಗನೆ ನಾಶ ವಾಗುವ ಮಣ್ಣು ಮತ್ತು ಮರಗಳಿಂದ ನಿರ್ಮಿತ ವಾದವು. ಗುಹಾಂತರ ದೇವಾಲಯಗಳೂ ಇಟ್ಟಿ ಗೆಯ ಕಟ್ಟಡಗಳೂ ಮುಂದೆ ಬಂದವು ಅಲಂಕಾ ರಮಯವಾದ ಬೃಹತ್ ಕಟ್ಟಡಗಳು ಮುಂದೆ ತಲೆದೋರಿದುವು.

ದೇಶದ ವಿಸ್ತಾರದ ದೃಷ್ಟಿಯಿಂದ ನೋಡಿದರೆ ದೇವಾಲಯಗಳ ನಿರ್ಮಾಣವು ಒಂದು ಕ್ರಮ ಬದ್ಧವಾದ ರೀತಿಯಲ್ಲಿ ಬೆಳೆದು ಬಂದಿದೆ. ಇದಕ್ಕೆ ಕಾರಣ ದೇವಾಲಯ ನಿರ್ಮಾಣ ಒಂದು ನಿಷ್ಕೃಷ್ಟ ತತ್ತ್ವದಿಂದ ಕೂಡಿದೆ.

ಮೂಲಮಾದರಿಯು ಒಂದೇ ಆಗಿದ್ದರೂ ಕಾಲಾ ನುಕಾಲದಲ್ಲಿ ದೇವಾಲಯ ನಿರ್ಮಾಣಕ್ರಮವು ವಿವಿಧ ರೀತಿಗಳಿಗೆ ಕಾರಣವಾಗಿದೆ. ಉತ್ತರ ದೇಶದ ನಾಗರ ಶೈಲಿಯು ವಕ್ರರೇಖೆಗಳಿಂದ ಪ್ರಸಿ ದ್ಧವಾಗಿದೆ. ದಕ್ಷಿಣದ ದ್ರಾವಿಡ ಶೈಲಿಯ ಸಮ ತಲ ಗೋಪುರಗಳು 'ಪಿರಮಿಡ್' ಆಕಾರಗಳಲ್ಲಿರು ತ್ತವೆ. ಇದರದರ ಮಿಶ್ರದಿಂದ ಕೂಡಿದುವು ವೇಸರ ಶೈಲಿಯವು.

ಉತ್ತರ ಮತ್ತು ಮಧ್ಯ ಭಾರತದ ಮೊದಲ ನೆಯ ದೇವಾಲಯಗಳು ಗುಪ್ತರ ಕಾಲದುವು (ಕ್ರಿ. ಶ. ೩೨೦ – ೬೫೦), ಸಾಂಚಿ, ಟಿಗವಾ (ಮಧ್ಯ ಪ್ರದೇಶದ ಜಬ್ಬಲ್‌ಪುರದ ಹತ್ತಿರ) ಭೂಮರ್ (ಮಧ್ಯಪ್ರದೇಶ) ನಂಚ್ನ (ರಾಜ ಸ್ಥಾನ) ದೇವಘರ್ (ಝಾನ್ಸಿಯ ಹತ್ತಿರ) ಇವು ಉತ್ತರ ಭಾರತದ ಕೆಲವು ಮಾದರಿಗಳು.

ತಮಿಳುನಾಡು ಮತ್ತು ಕರ್ನಾಟಕದಲ್ಲಿ ದಕ್ಷಿಣ ಭಾರತದ ಪ್ರಾಚೀನ ಕಟ್ಟಡಗಳಿವೆ. ಇವುಗಳ ಆದಿಭಾಗ ತಮಿಳುನಾಡಿನಲ್ಲಿವೆ. ಅವು ಬೌದ್ಧ



ಸ್ತೂಪಗಳಿಂದ ಪ್ರಭಾವಿತವಾಗಿವೆ. ಅವುಗಳಲ್ಲಿ ಗುಹಾಂತರ ದೇವಾಲಯಗಳೂ ಸೇರಿವೆ. ಮುಂದಿನ ಗುಹಾಂತರ ದೇವಾಲಯಗಳು ಕ್ರಿ. ಶ. ೫೦೦ ರಿಂದ ೮೦೦ ರ ಕಾಲದವು. ಇವು ವಿಶೇಷ ವಾಗಿ ಬ್ರಾಹ್ಮಣ ಅಥವಾ ಜೈನ ಧರ್ಮಾನುಸಾರಿ ಯಾದವು. ಕಂಚಿಯ ಪಲ್ಲವ, ಬಾದಾಮಿಯ ಚಾಳುಕ್ಯ, ಮಧುರೆಯ ಪಾಂಡ್ಯ ಮನೆತನದ ರಾಜರುಗಳ ಆಶ್ರಯಕ್ಕೆ ಸೇರಿದುವು. ಬಾದಾ ಮಿಯ ಚಾಳುಕ್ಯರ ಅವನತಿಯಾದ ಮೇಲೆ ಮಳ್ಖೇಡದ ರಾಷ್ಟ್ರಕೂಟರು ಅಧಿಕಾರಕ್ಕೆ ಬಂದು ದಕ್ಷಿಣದ ಶೈಲಿಯನ್ನು ಬೆಳಸಿದರು. ಎಲ್ಲೋರದ ಕೈಲಾಸನಾಥ ದೇವಾಲಯವು ಈ ಕಾಲಕ್ಕೆ ಸೇರಿದುದು.

ಪಶ್ಚಿಮ ಕರ್ನಾಟಕದಲ್ಲಿ ಪಟ್ಟದಕಲ್ ಮತ್ತು ಐಹೊಳೆಯ ಗುಂಪಿನ ದೇವಾಲಯಗಳು (ಕ್ರಿ. ಶ. ೫ ರಿಂದ ೭ ನೆಯ ಶತಮಾನ) ಪ್ರತ್ಯೇಕ ಶೈಲಿಯ ಆವಿರ್ಭಾವಕ್ಕೆ ಸೂಕ್ತ ಪ್ರಯೋಗಗಳಾಗಿವೆ. ಇವು ಸಂಪ್ರದಾಯಬದ್ಧವಾದ ಬೆಳವಣಿಗೆಯಿಂದ ಕೂಡಿವೆ. ಇವುಗಳಲ್ಲಿ ಐಹೊಳೆಯ ಹುಚ್ಚುಮಲ್ಲಿಯ ಗುಡಿ, ದುರ್ಗಾದೇವಿಯ ದೇವಾಲಯ ಮತ್ತು ಲಾಡಖಾ ದೇವಾಲಯ (ಕ್ರಿ ಶ. ೪೫೦–೬೫೦) ಗಳನ್ನು ಹೆಸರಿಸಬಹುದು. ಹಾಗೆಯೇ ಪಟ್ಟದಕಲ್ಲಿನ ದೇವಾಲಯಗಳು – ಕಾಶೀನಾಥ, ಸಂಗಮೇಶ್ವರ ವಿರೂಪಾಕ್ಷಿ ದೇವಾಲಯಗಳೂ, ಆಂಧ್ರರಾಜ್ಯ ದಲ್ಲಿರುವ ಆಲಂಪುರದ ಸ್ವರ್ಗಬ್ರಹ್ಮ ದೇವಾಲ ಯವೂ ಅಷ್ಟೇ ಮುಖ್ಯವಾದುವು. ಈ ಗುಂಪಿನ ಚಾಳುಕ್ಯರ ಗುಡಿಗಳಲ್ಲಿಯೇ ನಾಗರ ದ್ರಾವಿಡ ಮಿಶ್ರವಾದ ವೇಸರ ಶೈಲಿಯನ್ನು ಕಾಣುವುದು.

ಈ ಮೂರು ಶೈಲಿಯ ದೇವಾಲಯಗಳ ನಿರ್ಮಾಣ ವಿಷಯಕವಾದ ಶಾಸ್ತ್ರಭಾಗಗಳು ಆಗಮ, ಪುರಾಣ, ತಂತ್ರ ಮತ್ತು ವಾಸ್ತು–ಶಿಲ್ಪಗಳಲ್ಲಿ ಅಡಕವಾಗಿವೆ. ಅವೆಲ್ಲ ಈ ಮೂರು ಶೈಲಿಗಳ ಅಸ್ತಿತ್ವವನ್ನು ಒಪ್ಪಿಕೊಂಡಿವೆ. ಅವು ಕ್ರಮವಾಗಿ ತಮ್ಮ ಸಕ್ಷೆಗಳಲ್ಲಿ ಚತುಷ್ಕೋಣ, ಅಷ್ಟಕೋಣ ಮತ್ತು ವರ್ತುಲಾಕಾರದ ಅಗ್ರಗಳನ್ನು ಅಂಗೀಕಾರಮಾಡಿವೆ. ವೇಸರ ಶೈಲಿಯಲ್ಲಿ ಗರ್ಭಗೃಹಕ್ಕೆ ಚತುಷ್ಕೋಣಾಕಾರವಾದ ಮೇಲೆ ವರ್ತುಲಾಕಾರವೂ ಅಂಗೀಕೃತವಾಯಿತು. ಇವು ಮೂರು ಪ್ರತ್ಯೇಕವಾದ ದೇಶಭಾಗಗಳನ್ನಾಕ್ರಮಿಸಿಲ್ಲ. ದೇವಾಲಯದ ಗುಂಪುಗಳಿಗೆ ಅನ್ವಯಿಸುತ್ತವೆ. ವೇಸರ ಶೈಲಿಯು ಪಶ್ಚಿಮ ದಖ್ಖನ್ನಿನಲ್ಲಿಲ್ಲ. ದಕ್ಷಿಣ ಕರ್ನಾಟಕದಲ್ಲಿಯೇ ರೂಢಿಗೆ ಬಂದಿದೆ. ಬೌದ್ಧರ ಕಟ್ಟಡಗಳ ಪ್ರಭಾವದಿಂದ ಈ ವೇಸರ ಶೈಲಿಯು ಎಷ್ಟರ ಮಟ್ಟಿಗೆ ದಕ್ಷಿಣಕ್ಕೆ ಸೇರಿದುದೋ ಅಷ್ಟೇ ಉತ್ತರ ಭಾರತಕ್ಕು ಸೇರಿದುದೆಂದು ಹೇಳಬಹುದು. ಹಾಗೆಯೇ ೫–೬ನೆಯ ಶತಮಾನದ ಐಹೊಳೆ ಮತ್ತು ಪಟ್ಟದ ಕಲ್ಲಿನ ಗೋಪುರಗಳಲ್ಲಿ ನಾಗರೀ ಶೈಲಿಯ ಪ್ರಭಾವವೂ ಕಾಣುವುದು. ವಿಜಯನಗರದ ಕಾಲವಾದ ಮೇಲೆ ದಕ್ಷಿಣ ದೇಶದಲ್ಲೆಲ್ಲ ದ್ರಾವಿಡ ಮಾರ್ಗವೇ ಪೂರ್ಣವಾಗಿ ರೂಢಿಗೆ ಬಂದಿತು. ನಾಗರದ ವಿಮಾನಗಳು ತಮ್ಮ ಮೂಲದಿಂದ ಮೇಲಕ್ಕೆ ನೇರ ಊರ್ಧ್ವಮುಖವಾಗಿ ವಕ್ರರೇಖೆಗಳಲ್ಲಿ ಬೆಳೆದರೆ ದ್ರಾವಿಡ ಶೈಲಿಯ ಗೋಪುರಗಳು ಮೆಟ್ಟಿಲು ಮೆಟ್ಟಿಲುಗಳಲ್ಲಿ ಸಮತಲವಾಗಿ ಬೆಳೆಯುವುವು, ಉತ್ತರ ಶೈಲಿಯು ರಾಜಾಸ್ತಾನ್, ಒರಿಸ್ಸ, ಗುಜರಾತ್ ಮತ್ತು ವಿಂಧ್ಯಪರ್ವತ ಪರಿಸರಗಳಲ್ಲಿ ರೂಢಿಗೆ ಬಂದಿದೆ.

ಮುಂದಿನ ಒಂದು ಸಾವಿರ ವರ್ಷಗಳಲ್ಲಿ (ಕ್ರಿ. ಶ. ೬೦೦–೧೬೦೦) ದೇವಾಲಯ ಶಿಲ್ಪದಲ್ಲಿ ಅದ್ಭುತವಾದ ಪ್ರಗತಿಯುಂಟಾಯಿತು. ಈ ಮಾಲೆಯಲ್ಲಿ ಮೊದಲು ಕೆಲಸ ಮಾಡಿದವರು ಪಲ್ಲವರು ( ಕ್ರಿ. ಶ. ೬೦೦-೯೦೦ ). ಮಹಾಬಲಿಪುರದ ಗುಹಾಂತರ ದೇವಾಲಯಗಳೂ ಹೊರಗೆ ಕಟ್ಟಿರುವ ಕಡಲತೀರದ ಕಟ್ಟಡಗಳೂ, ಕಾಂಚೀಪುರದ ಕೈಲಾಸನಾಥ ದೇವಾಲಯ ಮತ್ತು ವೈಕುಂಠ ಪೆರುಮಾಳ್ ದೇವಾಲಯಗಳೂ ಪಲ್ಲವಮಾರ್ಗದ ಉತ್ತಮ ಮಾದರಿಗಳು. ದ್ರಾವಿಡ ಶಿಲ್ಪಕ್ಕೆ ಅಸ್ತಿಭಾರವನ್ನು ಹಾಕಿದವರು ಪಲ್ಲವರೆಂದು ಹೇಳಬಹುದು. ಅದು ವಿಶೇಷವಾಗಿ ಕುಸುಮಿತವಾದುದು ಚೋಳ, ಪಾಂಡ್ಯ, ವಿಜಯನಗರ ಮತ್ತು ಮಧುರೆಯ ನಾಯಕರುಗಳಿಂದ. ಈ ಕಾಲದಲ್ಲಿ ಕಟ್ಟಡಗಳೆಲ್ಲ ಬೃಹತ್ಪ್ರಮಾಣದ ಬಾಹ್ಯಾಂಭ್ಯಂತರ ಅಲಂಕಾರಗಳಿಂದ ಕೂಡಿದವು. ದ್ರಾವಿಡ ಶೈಲಿಯ ಉತ್ತಮೋತ್ತಮ ವೈಭವವನ್ನು ಕಾಣುವುದು ಚೋಳರ ಕಾಲದಲ್ಲಿ. (೯೦೦–೧೩೦೦) ಅದು ಆಕಾರದಲ್ಲಿಯೂ ಬೆಳೆಯಿತು ; ಆಕರ್ಷಕವಾಗಿಯೂ ಮಾಡಲ್ಪಟ್ಟಿತು. ಇವುಗಳಲ್ಲಿ ಬಹು ಸುಂದರವಾದ ದೇವಾಲಯವೆಂದರೆ ತಂಜಾವೂರಿನ ಬೃಹದೀಶ್ವರ ದೇವಾಲಯ. ೨೧೬ ಅಡಿ ಎತ್ತರದ ಗೋಪುರದಿಂದ ಕೂಡಿದೆ, ಮುಂದಿನ ಚೋಳರು ಪಾಂಡ್ಯರ ಮಾರ್ಗವನ್ನೇ ಅನುಸರಿಸಿ ಅತ್ಯಧಿಕವಾದ ಅಲಂಕಾರ, ಸುಂದರವಾದ ಪ್ರತಿಮೆಗಳು, ಗೋಡೆಗಳ ಹೊರಒಳಮೈಗಳ ಶಿಲ್ಪಗಳ ವೈಚಿತ್ರ್ಯ, ವಿಸ್ತಾರವಾದ ಕಂಬಸಾಲುಗಳ ಮಂಟಪ – ಇವುಗಳಿಂದ ಮತ್ತೂ ಆಕರ್ಷಕವನ್ನಾಗಿ ಮಾಡಿದರು. ದೇವಾಲಯದ ಗೋಪುರಗಳು ಗಗನ ಗಾಮಿಗಳಾದುವು. ಬಹು ವಿಸ್ತಾರವಾದ ಆವರಣಗಳನ್ನೊಳಗೊಂಡ ಮಧುರೆ ಮತ್ತು ಶ್ರೀರಂಗದ ದೇವಾಲಯಗಳು ಮುಂದಿನ ವಿಜಯನಗರ ಮತ್ತು ನಾಯಕರ ಮಾದರಿಯವು (೧೩೩೦–೧೫೬೫) ಹಂಪಿಯಲ್ಲಿರುವ ಪಂಪಾಪತಿ ಮತ್ತು ವಿಠಲ ದೇವಾಲಯಗಳೂ ಈ ಮಾದರಿಯವೇ. ವಿಜಯನಗರದ ಉತ್ತರಾಧಿಕಾರಿಗಳಾದ ಮಧುರೆಯ ನಾಯಕರು ಅದ್ಭುತವಾದ ಸಾವಿರಕಾಲು ಮಂಟಪಗಳಿಂದ ದೇವಾಲಯವನ್ನು ಇನ್ನೂ ಆಕರ್ಷಕವಾಗಿ ಬೆಳೆಸಿದರು.

ಚೋಳರ ಸಮಕಾಲೀನರಾಗಿ ಕರ್ನಾಟಕದಲ್ಲಿ ರಾಜ್ಯವಾಳುತ್ತಿದ್ದ ಹೊಯ್ಸಳರು ಕರ್ನಾಟಕದ ಅನೇಕಕಡೆಗಳಲ್ಲಿ ಅತ್ಯಂತ ಕುಸುರಿ ಕೆಲಸಗಳಿಂದ ಕೂಡಿದ ಶಿಲ್ಪಗಳಾದ ಜಾಲಂಧ್ರಗಳು, ಗೋಡೆಯ ಶಿಲ್ಪಗಳು, ಕಡೆದ ಕಂಬಗಳು, ಭುವನೇಶ್ವರಿಗಳು, ಚಿತ್ರದ ಮೇಲ್ಛಾವಣಿಗಳು, ಶಿಲಾಬಾಲಿಕೆಯರು, ಪರಿವಾರ ದೇವತೆಗಳ ವಿಗ್ರಹಗಳು – ಮೊದಲಾದುವುಗಳಿಂದಲೂ ವಿಮಾನಗಳಿಂದಲೂ ದೇವಾಲಯಗಳನ್ನು ಅತಿ ಸುಂದರವನ್ನಾಗಿಸಿದರು. ಇವುಗಳಲ್ಲಿ ಪ್ರಸಿದ್ಧವಾದುವು ಬೇಲೂರು, ಹಳೆಯಬೀಡು, ಸೋಮನಾಥಪುರದ ದೇವಾಲಯಗಳು.

ಈ ಕಾಲದಲ್ಲಿಯೇ ಉತ್ತರಭಾರತದಲ್ಲಿ ಒರಿಸ್ಸ, ಮಧ್ಯಭಾರತ, ರಾಜಸ್ತಾನ್, ಗುಜರಾತ್ ಮೊದಲಾದೆಡೆಗಳಲ್ಲಿ ದೇವಾಲಯಗಳು ಅಭಿವೃದ್ಧಿಯಾದುವು. ಇವುಗಳಲ್ಲಿ ಭುವನೇಶ್ವರದ ಲಿಂಗರಾಜ ದೇವಾಲಯ, ಪುರಿಯ ಜಗನ್ನಾಥ, ಕೋನಾರ್ಕದ ಸೂರ್ಯ ದೇವಾಲಯ – ಇವು ಒರಿಸ್ಸದ ಮಾದರಿಯವು. ಖುಜರಾಹೋ, ಮಾಂಷ್ಹೀರ್ ದಲ್ಲಿರುವ ದೇವಾಲಯಗಳು ಮಧ್ಯಭಾರತದ ಮಾದರಿಯವು. ಇಟ್ಟಿಗೆಗಾರೆಯಿಂದ ಕಟ್ಟಿದವೂ, ಇಳಿಜಾರು ಚಾವಣಿಯಲ್ಲಿ ಕೂಡಿದವೂ ಆದ ಕೇರಳ ದೇವಾಲಯಗಳೂ ಭಿನ್ನ ಭಿನ್ನ ಮಾದರಿಯವು.

# ಸಂಸ್ಕೃತಿ ಸಂವರ್ಧನೆ

ದೇವಾಲಯಗಳ ಪ್ರಭಾವ :– ಭಾರತೀಯರ ಸಂಸ್ಕೃತಿಯ ಬೆಳವಣಿಗೆಯಲ್ಲಿ ದೇವಾಲಯಗಳು ಬಹುಪ್ರಮುಖವಾದ ಸ್ಥಾನವನ್ನಾಕ್ರಮಿಸಿರುವುವು. ದೇವಾಲಯದ ನಿರ್ಮಾಣದಿಂದ ನಾನಾ ಲಲಿತ ಕುಶಲಕಲೆಗಳು ಅಭಿವೃದ್ಧಿಯಾದುವು. ರಾಜಾಧಿರಾಜರೂ ಇತರ ಶ್ರೀಮಂತರೂ ಈ ಕಾರ್ಯಕ್ಕಾಗಿ ಅನೇಕ ಶಿಲ್ಪಿಗಳಿಗೆ ಸ್ಥಪತಿಗಳಿಗೆ, ಕರ್ಮಕಾರರಿಗೆ ಆಶ್ರಯವಿತ್ತು ಅವರ ಅಶನ ವಸನಗಳಿಗೆ ಗ್ರಾಮ ಭೂಮಿಗಳನ್ನು ದಾನಮಾಡಿದ್ದಾರೆ. ನಾಡಿನ ಬಹುಮಟ್ಟಿನ ಉದ್ಯೋಗ ಸಮಸ್ಯೆ ಇದರಿಂದ ಪರಿಹಾರವಾಗಿದೆ. ಎಲ್ಲೋರ ದೇವಾಲಯವನ್ನು ಕೊರೆಯುವುದಕ್ಕೆ ಇಪ್ಪತ್ತೈದು ಲಕ್ಷ ಜನಕ್ಕೆ ೨೧ ವರ್ಷ ಹಿಡಿಯಿತಂತೆ. ಬೃಹದೀಶ್ವರ ದೇವಾಲಯವನ್ನು ನಿರ್ಮಿಸಲು ಸಾವಿರಾರು ಜನರಿಗೆ ೧೨ ವರ್ಷ ಹಿಡಿಯಿತಂತೆ, ರಾಮೇಶ್ವರ ದೇವಾಲಯವನ್ನು ಕಟ್ಟಲು ೩೦೦ ವರ್ಷಗಳು ಹಿಡಿಯಿತಂತೆ. ದೇವಾಲಯಕ್ಕೆ ಸಂಬಂಧಪಟ್ಟ ಹಾಗೆ ಅನೇಕ ಇತರ ಕುಶಲಕಲೆಗಳು ಅಭಿವೃದ್ಧಿಯಾದುವು. ಸಂಗೀತ, ನೃತ್ಯ, ವಾದ್ಯಗಳ ನಿರ್ಮಾಣ, ಪಾಕವಿದ್ಯೆ, ರಥನಿರ್ಮಾಣ ಚಿಮಿಕಿ ಕೆಲಸ, ಹೊಲಿಗೆ, ಸುಗಂಧವಾದ ಉದ್ಯಾನ ನಿರ್ಮಾಣ, ಖಗೋಳ ಶಾಸ್ತ್ರ, ವಾಹನಗಳ ತಯಾರಿಕೆ, ಲೋಹ ವಿದ್ಯೆ, ಚಿನ್ನ ಬೆಳ್ಳಿಯ ಕೆಲಸ, ರತ್ನಪಡಿ ಕಟ್ಟಡದ ಕೆಲಸ, ಪೂಜಾಸಾಮಗ್ರಿಗಳ ರಚನೆ, ಮರದ ಕೆಲಸ, ದಂತದ ಕೆಲಸ ಇವುಗಳನೇಕವುಗಳ ಅಭಿವೃದ್ಧಿಗೆ ದೇವಾಲಯ ನಿರ್ಮಾಣ ಪ್ರೇರಕ ಮತ್ತು ಪ್ರಚೋದಕ.

ಶಿಲ್ಪಶಾಸ್ತ್ರ, ಸ್ಥಳಮಹಾತ್ಮ್ಯ, ಆಗಮಗಳು, ಪುರಾಣ ಮೊದಲಾದ ಗ್ರಂಥರಾಶಿಗಳ ನಿರ್ಮಾಣಕ್ಕೆ ದೇವಾಲಯಗಳೇ ಆಧಾರ.

ಭಕ್ತಿ ಸಾಹಿತ್ಯ ರಚನೆಗೆ ದೇವಾಲಯಗಳೇ ಅಡಿಗಲ್ಲು. ಆಳ್ವಾರುಗಳ ಪ್ರಬಂಧಗಳು, ನಾಯನಾರ್‌ರ ತೇವಾರಗಳು, ದಾಸರಪದಗಳು, ಶಿವಶರಣರ ವಚನಗಳು–ಇವುಗಳ ರಚನೆಗೂ ದೇವಾಲಯಗಳೇ ಪ್ರೇರಕ. ಅವುಗಳನ್ನು ರಕ್ಷಿತವಾಗಿಡುವುದಕ್ಕೂ, ಅವುಗಳನ್ನು ಪ್ರತಿದಿನ ಜನರಿಗೆ ಹಾಡಿ

( 32ನೇ ಪುಟ ನೋಡಿ )

## ಹರಿದಾಸ ವಾಣಿ

ಕನ್ನಡ ಭಾಷೆಯಲ್ಲಿ ದಾಸಸಾಹಿತ್ಯ ಎಂಬ ಒಂದು ಪ್ರಕಾರ ವಿಶಿಷ್ಟವಾದುದು; ಭೂಯಿಷ್ಠವಾಗಿ ಬೆಳೆದಿರುವಂತಹುದು. ನೂರಾರು ಕೃತಿಕಾರರು ಸಾವಿರಾರು ಕೃತಿಗಳನ್ನು ರಚಿಸಿ ಒಂದು ದೊಡ್ಡ ಭಂಡಾರವನ್ನೇ ಸಿದ್ಧ ಮಾಡಿದ್ದಾರೆ.

ಇಂತಹ ಅಪಾರವಾದ ಹರಿದಾಸಸಾಹಿತ್ಯದಲ್ಲಿ ನೀತಿಬೋಧೆ, ವ್ಯಂಗ್ಯ, ಕಟಕಿ, ಹಾಸ್ಯ, ಕಾವ್ಯ, ಅಲಂಕಾರ, ಸಮಾಜದೃಷ್ಟಿ ಮೊದಲಾದುವೆಲ್ಲಾ ಇದ್ದರೂ ಇವೆಲ್ಲವುಗಳ ಹಿನ್ನೆಲೆಯಲ್ಲಿ ಹರಿಯುತ್ತಿರುವ ಸಲಿಲಸ್ರೋತ ದ್ವೈತಸಿದ್ಧಾಂತ.

ಸರ್ವಮೂಲವೆಂದು ಪ್ರಸಿದ್ಧವಾದ ಮೂಲ ಮೂವತ್ತೇಳು ಉದ್ಗ್ರ ಕೃತಿ ರತ್ನಗಳನ್ನು ರಚಿಸಿ, ತಮ್ಮ ತತ್ತ್ವಗಳ, ಪ್ರಯೋಗಶೀಲ ರಹಸ್ಯವನ್ನು ಬೋಧಿಸಿ ಅದರಿಂದ ಜೀವಕ್ಕೆ – ಜೀವನಕ್ಕೆ ಉಪಯುಕ್ತವಾಗುವಂತೆ ತೋರಿಕೊಟ್ಟವರು ಶ್ರೀಮದಾನಂದ ತೀರ್ಥ ಗುರುವರೇಣ್ಯರು.

ಆಚಾರ್ಯರ ಸದ್ಬೋಧೆಯ ಈ ಜಾಡನ್ನು ಹಿಡಿದು ಮುಂದೆ ಬಹು ಮಂದಿ ಮುನ್ನಡೆದರು.

ಎರಡು ಶತಮಾನಗಳು ಕಳೆದ ಮೇಲೆ ಹದಿನೈದನೇ ಶತಮಾನದ ಕೊನೆಯ ವೇಳೆಗೆ ಈ ಮೂಲ – ವ್ಯಾಖ್ಯಾನ ಟಿಪ್ಪಣಿಗಳೆಲ್ಲಾ ಹುಟ್ಟಿದ ಸಂಸ್ಕೃತ ಭಾಷೆ ಜನರಿಂದ ನಿಧಾನವಾಗಿ ದೂರಸರಿದ ಸುಳಿವು ಹತ್ತಿದಾಗ, ಅವುಗಳ ಸಾರವನ್ನು ಸಾಮಾನ್ಯ ಜನ ಭಾಷೆಯಲ್ಲಿಯೇ ನೀಡಿ ಅದನ್ನು ಉಳಿಸಲು ಆ ಮೂಲಕ ಬೆಳೆಸಲು ಪ್ರಯತ್ನಿಸಿ ಪರೋಪಕಾರ ಮಾಡಿದವರು ಹರಿದಾಸರು.

ಹರಿದಾಸರಲ್ಲಿ ಒಬ್ಬಿಬ್ಬರನ್ನು ಬಿಟ್ಟರೆ, ಎಲ್ಲರೂ ದ್ವೈತಪಂಥದ ಅನುಯಾಯಿಗಳೇ. ದಾಸಪಂಥದ ಪಿತಾಮಹರು ಶ್ರೀಪಾದರಾಜರು, ಮಹಾಪೋಷಕರು ವ್ಯಾಸರಾಜರು. ಇವರ ಶಿಷ್ಯರಾದ ಪುರಂದರ ಕನಕದಾಸರುಗಳೇ ದಾಸಸಾಹಿತ್ಯದ ಜೀವ ಜೀವಾಳ.

# ಹರಿದಾಸ ಸಾಹಿತ್ಯದಲ್ಲಿ ದ್ವೈತ

ಎರಡನೆಯ ಘಟ್ಟದಲ್ಲಿ ಪ್ರಸಿದ್ಧರಾದ ವಿಜಯದಾಸರು, ಮಹಿಪತಿದಾಸರು, ಗೋಪಾಲದಾಸರು, ವೇಣುಗೋಪಾಲದಾಸರು, ಜಗನ್ನಾಥದಾಸರು, ಪ್ರಾಣೇಶದಾಸರು ಕರ್ಜಗಿದಾಸರು – ಎಲ್ಲ ದ್ವೈತಿಗಳೇ, ಶ್ರೀಮನ್ಮಧ್ವಾಚಾರ್ಯರ ಪರಮ ಭಕ್ತರಾದವರೇ.


ಡಾ॥ ಕೆ. ಎಂ. ಕೃಷ್ಣರಾವ್


ದ್ವೈತಸಿದ್ಧಾಂತದ ಪರಮ ಪ್ರಮೇಯ ರತ್ನಗಳು ಪಂಡಿತ ಕೋಶಾಗಾರದಲ್ಲೇ ಬೀಗ ಮುದ್ರೆಯಲ್ಲಿ ಭದ್ರವಾಗಿ ಕುಳಿತು ಬಿಟ್ಟರೆ ಅದರ ಸಾರ್ಥಕ್ಯ ಅನುಷ್ಠಾನರಹಿತವಾಗುವುದೆಂದು ಮನಗಂಡ ಶ್ರೀಪಾದರಾಜರು ಜನಮನದಲ್ಲಿ ಜೀವಂತವಾಗಿ ಉಳಿದು ಆತ್ಮೋದ್ಧಾರಕ್ಕೆ ಕಾರಣವಾಗಬೇಕೆಂಬ ಉದಾತ್ತ ಹೃದಯದಿಂದ ಈ ಪಂಥವನ್ನು ಸ್ಥಾಪಿಸಿ ತಾವೇ ಹಲವು ಕೃತಿಗಳನ್ನು ಕನ್ನಡದಲ್ಲಿ ರಚಿಸಿಕೊಟ್ಟರು. ಸಂಗೀತ ಸಾಹಿತ್ಯ ನೃತ್ಯವೆಂಬ ಲಲಿತಕಲೆಗಳ ನೆರವಿನಿಂದ ಸಿದ್ಧಾಂತದ ತತ್ತ್ವಗಳನ್ನು ಆಕರ್ಷಕವನ್ನಾಗಿ ಮಾಡಿ ಶ್ರವಣಮನನಾನಂದವೂ ಭವಜನಿತ ದುಃಖ ಪರಿಹಾರವೂ, ಇಹಪರಭೋಗ ಸಾಧಕವೂ ಆನಂದದಾಯಕವೂ ಆಗುವಂತೆ ಪ್ರಾಕೃತ ಭಾಷಾ ತಂತಿಯಲ್ಲಿ ತತ್ತ್ವರತ್ನಗಳನ್ನು ಕೋದು ಸೊಗಸಾದ ಮಾಲೆಗಳನ್ನು ಹರಿದಾಸರು ಕಟ್ಟಿಕೊಟ್ಟರು.

ರಾಗ ತಾಳ ಲಯ ಛಂದೋಬದ್ಧವಾಗಿ ಸಾಹಿತ್ಯದ ಸವಿಯೊಂದಿಗೆ ಹೊರ ಹೊಮ್ಮಿರುವ ಈ ಹರಿದಾಸ ಕೃತಿಗಳ ಸೊಬಗು ಮನ ಮೆಚ್ಚಿಸುವಂತಹುದು, ತಲೆ ದೂಗಿಸುವಂತಹುದು, ಹೃದಯವನ್ನು ಕರಗಿಸಿ ಹದ ಮಾಡುವಂತಹುದು. ಎಷ್ಟೇನಷ್ಟವಾಗಿದ್ದರೂ ಈ ಕೃತಿಗಳು ಸಾವಿರಾರು ಸಂಖ್ಯೆಯಲ್ಲಿವೆ.

ಹರಿದಾಸ ಎಂಬುದರ ಹ್ರಸ್ವರೂಪ ದಾಸ. ಹರಿದಾಸ ಎಂದರೆ ಶ್ರೀಹರಿಯು ಭಕ್ತ ಎಂದೇ ಅರ್ಥ. ಈ ಹರಿಭಕ್ತರು ರಚಿಸಿದ

ಮಧ್ವಾಚಾರ್ಯರ ಹೆಸರು ಭಾರತೀಯ ತತ್ತ್ವಶಾಸ್ತ್ರದ ಇತಿಹಾಸದಲ್ಲಿ ಪ್ರಖ್ಯಾತವಾದದ್ದು. ಭಾರತೀಯ ತತ್ತ್ವಶಾಸ್ತ್ರದ ಅಧ್ಯಯನ ಆಚಾರ್ಯರು ಪ್ರತಿಪಾದಿಸಿದ ದ್ವೈತ ತತ್ತ್ವದ ಹೊರತಾಗಿ ಪೂರ್ಣವಾಗಲಾರದು. ಸರ್ವಮೂಲವೆಂದು ಹೆಸರಾದ ಅವರ ಕೃತಿಗಳಷ್ಟೂ ಸಂಸ್ಕೃತದಲ್ಲಿದ್ದು ಕನ್ನಡದಲ್ಲಿ ಅದರ ಸವಿಗಾಣಲು ಹರಿದಾಸ ಸಾಹಿತ್ಯಕ್ಕೇ ಮೊರೆಹೋಗಬೇಕು. ಜನವರಿ ತಿಂಗಳ ಮಧ್ವನವಮಿಯ ಸಂದರ್ಭದಲ್ಲಿ ಆಚಾರ್ಯರ ತಾತ್ತ್ವಿಕ ವಿಚಾರಗಳನ್ನು ಕನ್ನಡೀಕರಿಸಿದ ಹರಿದಾಸರ ಮಾತುಗಳನ್ನು ಮನನಮಾಡಲೆಂದು ಸಪ್ತಗಿರಿ ಬಯಸುತ್ತದೆ. ಸಂ॥

ಕೃತಿಸಮುದಾಯ ಹರಿದಾಸಸಾಹಿತ್ಯ ಅಥವಾ ದಾಸಸಾಹಿತ್ಯ. ಹೀಗೆ ಈ ಹರಿದಾಸ–ದಾಸ ಎಂಬ ಶಬ್ದದಲ್ಲಿಯೇ ದ್ವೈತ ಅಡಗಿ ಕುಳಿತಿದೆ.

ಶ್ರೀಹರಿ ಸರ್ವೋತ್ತಮನು. ಜೀವರೆಲ್ಲಾ ಅವನ ಕಿಂಕರರು; ( ಹರಿಃಪರತರಃ ಜೀವಗಣಾಃ ಹರೇರನುಚರಾಃ; ) ಶ್ರೀಹರಿ ಸ್ವತಂತ್ರ–ಜೀವರೆಲ್ಲ ಅಸ್ವತಂತ್ರ ಎಂಬುದೇ ಮಧ್ವಾಚಾರ್ಯರ ಮುಖ್ಯತತ್ತ್ವ. ಈ ಅರ್ಥವೂ ದಾಸ ಶಬ್ದದಲ್ಲಿ ಅಡಗಿದೆ.

ದಾಸೋಹಂ ಎಂತೆಂಬ ರಹಸ್ಯವನರಿದರು ಪುರಂದರ ವಿಠಲನ ಬೇಹಿನವರು.

ಹನುಮನ ಮತವೆ ಹರಿಯ ಮತವು
ಹರಿಯ ಮತವೆ ಹನುಮನ ಮತವು
ಹನುಮ ಪುರಂದರ ವಿಠಲನದಾಸ
ಪುರಂದರ ವಿಠಲ ಹನುಮನೊಳ್ವಾಸ!

... ... ... ... ...

ಭಾರತಿದೇವಿಯ ನೆನೆ ನೆನೆ
ನಿರುತ ಭಕುತಿಗಿದು ಮನೆ ಮನೆ

–ಇಲ್ಲೆಲ್ಲಾ ದ್ವೈತದರ್ಶನದ ಪ್ರಮೇಯಗಳು ತುಂಬಿವೆ. ಭಾರತೀದೇವಿ ಭಕ್ತಿಗೆ ಅಭಿಮಾನಿ; ಪರಮಾತ್ಮನ ಭಕ್ತರಲ್ಲಿ ಶ್ರೇಷ್ಠರು ಮೊದಲಾದ ತತ್ತ್ವಗಳನ್ನು ಇಲ್ಲಿ ಅಡಕಗೊಳಿಸಲಾಗಿದೆ.

ಪಾಪ್ರೋಕು ಪೋದುವಲ್ಲ ಸ್ವಾಮಿ ಎನ್ನ
ಅಪಾರದಿನಗಳಿಂದ ಆರ್ಜನೆಮಾಡಿದ

... ... ... ... ...

ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರ ವಿಠಲನ
ಮಾಯದಿಂದಲಿ ಮುಟ್ಟಿಮಾಯವಾದುವು

ಹೊರನೋಟಕ್ಕೆ ಪಾದರಕ್ಷೆ ಕಳವಾಯಿತು ತಿರುಮಲೆಯಲ್ಲಿ ಶ್ರೀ ಶ್ರೀನಿವಾಸನನ್ನು ದರ್ಶನಮಾಡಲು ಹೋದಾಗ ಎಂದರ್ಥವಾಗುವ ಈ ಹರಿದಾಸಕೃತಿ ಬ್ರಹ್ಮತತ್ತ್ವಗಳಿಂದ ತುಂಬಿಕೊಂಡಿದೆ. ಬಹುಜನ್ಮಗಳಿಂದ ಗಳಿಸಿದ ಅಪುಣ್ಯಪಾಪಗಳು–ವಾಸುದೇವರೂಪೀ ಪರಮಾತ್ಮನ ಪತ್ನಿಯಾದ ಮಾಯಾದೇವಿ, ತಾಮಸ ಗುಣ ಪ್ರೇರಕಳಾಗಿ ಜೀವನಿಂದ **ಮಾಡಿಸಿದ** ಪಾಪಗಳನ್ನು ದೈತ್ಯರೆಂಬ ದಾಯಾದಿಗಳು ಕರುಬಿ ಹಂಚಿಕೊಂಡರು! ಅದು ವಾಸುದೇವನ ಮಾಯೆ ಎಂದರೆ ಇಚ್ಛೆಯಿಂದ ಆಗಿಹೋಯಿತು. ಒಳಗೆನಿಂತು ದುಷ್ಪ್ರೇರಣೆ ಮಾಡುವವರು ದೈತ್ಯರು – ತಾಮಸರು– ಸಾತ್ವಿಕರ ದಾಯಾದಿಗಳು, ದೇವತೆಗಳ ದಾಯಾದಿಗಳು ( ಚಿಕ್ಕಮ್ಮನ ಮಕ್ಕಳು ). ಪಶ್ಚಾತ್ತಾಪ ಪ್ರಾರ್ಥನೆ ತಪಸ್ಸು ಮುಂತಾದುವುಗಳಿಂದ ಪಾಪಗಳನ್ನು ಸಾತ್ವಿಕರು ಕಳೆದುಕೊಂಡರೆ, ಅವರ ನಿಂದೆಯಿಂದ ತಾಮಸರು ಅವರ ಪಾಪಗಳನ್ನು ಗಳಿಸುತ್ತಾರೆ! ಇಂತಹ ತತ್ತ್ವರಹಸ್ಯಗಳು ಈ ಕೃತಿಗಳಲ್ಲಿ ಅಡಗಿರುತ್ತವೆ. ಅವುಗಳನ್ನು ಹಿಂಜಿತೆಗೆದು ಅರ್ಥಮಾಡಿಕೊಂಡು ಅರಿವನ್ನುಂಟುಮಾಡಿಕೊಂಡು ಸವಿಯಬೇಕಾಗುತ್ತದೆ.

ನೇರವಾಗಿಯೂ ತತ್ತ್ವಗಳನ್ನು ಹೇಳುವುದುಂಟು

ಸತ್ಯಂ ಜಗಕಿದು ಪಂಚ ಭೇದವು ನಿತ್ಯ
ಶ್ರೀ ಗೋವಿಂದನ
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿ
ಕೆಂದು ಸಾರಿರೈ

... ... ... ... ...

ಡಂಗುರವ ಸಾರಯ್ಯ ಡಿಂಗರಗರೆಲ್ಲರು
ಏನೆಂದು ?
ಪಾಂಡುರಂಗ ವಿಠಲನೆ ಪರದೈವವೆಂದು

– ಮುಂತಾದ ಕೃತಿಗಳಲ್ಲಿ ತಾರತಮ್ಯ ಪಂಚಭೇದ ಪ್ರಪಂಚತತ್ತ್ವ ಮೊದಲಾದ ಮನನೀಯ ಪ್ರಮೇಯಗಳನ್ನು ಸ್ಪಷ್ಟವಾಗಿ ವಿವರಿಸಿದ್ದಾರೆ.

ರುದ್ರದೇವರ ಸ್ಥಾನ ದ್ವೈತಸಿದ್ಧಾಂತದಲ್ಲಿ ವಿಶಿಷ್ಟವಾಗಿದೆ. ಹರ ವೈಷ್ಣವ ಭಕ್ತೋತ್ತಮ; ತಾರತಮ್ಯ ಶ್ರೇಣಿಯಲ್ಲಿ ಐದನೆಯ ಕಕ್ಷೆಯಲ್ಲಿ ಅವರು ಬರುತ್ತಾರೆ– 1) ಶ್ರೀಹರಿ, 2) ಮಹಾಲಕ್ಷ್ಮಿ, 3) ಬ್ರಹ್ಮ-ವಾಯು 4) ಸರಸ್ವತೀ-ಭಾರತೀ 5) ಗರುಡ ಶೇಷ, ರುದ್ರರು–ಹೀಗೇ.

ಹರಿದಾಸರು ಹರನನ್ನು ಬಣ್ಣಿಸುತ್ತಾರೆ ಮನೋಭಿಮಾನಿ ಗುರುವೆಂದು, 'ತೈಲಧಾರೆಯಂತೆ ಮನಸುಕೊಡೊ ಹರಿಯಲ್ಲಿ' ಎಂದು. 'ಇಂದಿರೇಶ ಶ್ರೀರಾಮನ ಪಾದವ ಚಂದದಿ ಪೊಗಳುವ ನೀನೆ ಕೊರಳೊಳು ರುದ್ರಾಕ್ಷಿ ಭಸ್ಮವ ಧರಿಸಿದ ಪರಮ ವೈಷ್ಣವ ನೀನೇ ಗರುಡಗಮನ ಶ್ರೀ ಪುರಂದರ ವಿಠಲಗೆ ಪ್ರಾಣಪ್ರಿಯ ನೀನೆ' ಎಂದು.

( 27ನೇ ಪುಟ ನೋಡಿ )

# ತಿರುಪತಿಯಲ್ಲಿ ಲಾಡು

ತಿರುಮಲೆಯಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಹಾಗೂ ದೇವಾಲಯದ ಎದುರಿಗಿನ ಬ್ಯಾಂಕ್‌ನಲ್ಲಿ ಮಾತ್ರವೇ ದೊರೆಯುತ್ತಿದ್ದ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರಸಾದವಾದ ಲಾಡು ಈಗ ತಿರುಪತಿಯಲ್ಲೂ ದೊರೆಯುವಂತೆ ಯೋಜಿಸಲಾಗಿದೆ. ತಿರುಪತಿಯ ಶ್ರೀ ಗೋವಿಂದರಾಜ ಸ್ವಾಮಿ ದೇವಾಲಯದಲ್ಲಿ ಈ ಲಾಡು ವಿಕ್ರಯಕ್ಕಾಗಿಯೇ ಪ್ರತ್ಯೇಕವಾಗಿ ಉಂಟು ಮಾಡಿರುವ ಕೌಂಟರಿನಲ್ಲಿ ಯಾತ್ರಿಕರು ಕೊಳ್ಳಬಹುದು

**ಕೌಂಟರ್ ಕೆಲಸ ಮಾಡುವ ಕಾಲ :** ಬೆ. 6 ರಿಂದ 7 ವರೆಗೆ
ಬೆ. 9 ರಿಂದ 12 ವರೆಗೆ
ಮ. 3 ರಿಂದ ಸಂ. 7 ವರೆಗೆ

**ಬೆಲೆ : ರೂ. 3—50 ( ಪ್ರತಿ ಲಾಡು )**

# ದಾಸಸಾಹಿತ್ಯದಲ್ಲಿ




ನವರಸದಲ್ಲಿ ಒಂದಾದ ಶೃಂಗಾರರಸವೇ ಭಕ್ತಿ ರಸವಾದುದರಿಂದ ದಾಸರು ಕೇವಲ ಪರಮಾತ್ಮನಲ್ಲಿ ನವವಿಧಭಕುತಿ ರೂಪವಾಗಿ ಬಳಸಿಕೊಂಡು ತಮ್ಮ ಪದಪದ್ಯಗಳಲ್ಲಿ ಭಗವಂತನ ಅನಂತ ಗುಣ ರೂಪ ಕ್ರಿಯೆಗಳನ್ನು ದ್ವಂದ್ವಾರ್ಥದಲ್ಲಿ ದಿಗ್ದರ್ಶಿಸಿದ್ದಾರೆ. ಗೋಪಿಯರೊಡನೆ ರಾಸಕ್ರೀಡೆಯಾಡಿದ ಕೃಷ್ಣನ ಶೃಂಗಾರರಸವನ್ನು ದಾಸರು ತಮ್ಮ ಅಂತಃಚಕ್ಷುವಿನಿಂದ ಕಂಡು ಬಹು ಸ್ವಾರಸ್ಯವಾಗಿ ಭಾವುಕ ರಸಿಕರಿಗೆ ತೃಪ್ತಿಯಾಗುವಂತೆ ವರ್ಣಿಸಿದ್ದಾರೆ.

ಗೋಕುಲದಲ್ಲಿರುವ ಗೋಪಿಕಾಸ್ತ್ರೀಯರು ಯಶೋದೆಯ ಮುಂದೆ ಕೃಷ್ಣನ ಕಾಮುಚಲ್ಲಾಟದ ಬಗ್ಗೆ ಚಾಡಿಹೇಳುವವರೇ ಹೆಚ್ಚು ಜನ.

"ನಿನ್ನ ಮಗ ಶಿಶುವಲ್ಲ. ಏಕಕಾಲದಲ್ಲಿ ಎಲ್ಲರ ಮನೆಯಲ್ಲಿದ್ದು ತನ್ನ ಅನಂತರೂಪಕ್ರಿಯೆಗಳನ್ನು ತೋರಿಸುವವನಮ್ಮ"– ಎಂದು ಹೇಳಿದ ಗೋಪಿ–

ಒಬ್ಬರಮನೆಯಲ್ಲಿ ಮಲಗಿ ತಾನಿರುವ
ಒಬ್ಬರ ಮನೆಯಲ್ಲಿ ರತಿಕ್ರಿಡೆಯಾಡುತಿರುವ
ಒಬ್ಬರ ಮನೆಯಲ್ಲಿ ಪುಟ್ಟ ಚೆಂಡನಾಡುವ
ಒಬ್ಬರ ಮನೆಯಲ್ಲಿ ಬೆಣ್ಣೆ ಕದ್ದು ಮೆಲುವಾ–
ನಿನ್ನ ಕಂದಗೆ ಏಸು ರೂಪವೆ ?
ಎಂದು ಪ್ರಶ್ನಿಸುತ್ತಾಳೆ.

ಇನ್ನೊಬ್ಬಳು ಬಹು ಲಜ್ಜಿತಳಾಗಿ –

ನಿತ್ಯವಾಗಿ ಎನ್ನ ಅತ್ತೆಯೆಂದು ಕರೆವ
ಎತ್ತಹೋಗಲು ಎನ್ನಹತ್ತಿರಕೂಡುವಾ
ಕತ್ತರಿಸ್ಯೆನ್ನ ಸೀರೆ ಬತ್ತಲೆಮಾಡಿದ
ಚೆಂದವಾಗಿದೆ ಎಂದು ಆನಂದದಲ್ಲಿ
ಬಂದು ಮಲಗಿ ಕಂದನಲ್ಲವೆಂದು
ಚೆಂದುಟಿ ಸವಿಯುತ ಮುಂದಿನಕಾರ್ಯ
ಮುಕುಂದ ಮಾಡಿದನು –
ಎಂದು ಹೇಳುತ್ತಾಳೆ.

ಗೋಕುಲದಲ್ಲಿ ಮೊಸರು ಮಾರುವ ಸ್ತ್ರೀಯರೆಲ್ಲ ಒಂದಾಗಿ ಕೃಷ್ಣನ ತುಂಟತನವನ್ನು ತಾಳಲಾರದೆ ಯಶೋದೆಯ ಮುಂದೆ ತಮಗಾದ ಫಜೀತಿಯನ್ನು ಒಬ್ಬೊಬ್ಬರಾಗಿ ವಿವರಿಸುತ್ತಾರೆ.

ಮೊಸರು ಮಾರಲು ಪೋದರೆ ನಿನ್ನಯ ಕಂದ
ಹೆಸರೇನೆಂದು ಕೇಳಿದ ಹಸನಾದ ಹೆಣ್ಣಮೇಲೆ
ಕುಸುಮವತಂದಿಕ್ಕಿ ಶಶಿಮುಖಿಯರಿಗೆಲ್ಲ
ಬಸಿರು ಮಾಡಿದ
ಎಂದೊಬ್ಬಳು ಹೇಳಿದರೆ,

ಇನ್ನೊಬ್ಬಳು –

ಕಾಂತೆಕೇಳು ಏಕಾಂತದಿ ಮಲಗಿದ್ದೆ
ಕಾಂತದಿಂದ
ಏಕಾಂತಕೆ ಕರೆದು ಗಾಢಾಲಿಂಗನಮಾಡಿ ಓಡಿ
ಪೋದನಮ್ಮ

ಇಂತದಾರ ಮಗನಮ್ಮಾ ?

ಎಂದು ಗಾಬರಿಯಾಗಿ ಕೇಳುತ್ತಾಳೆ.

ಇನ್ನೊಬ್ಬ ಸಖಿ ಯಶೋದೆಯ ಮುಂದೆ ಹೇಳುವ ಚಾಡಿಯು ರೀತಿಯೇ ಬೇರೆ.

"ಕೇಳೆ ಗೋಪಿ ನಿನ್ನ ಮಗ ಸೂಳೆಗಾರನಂತೆ ವೀಳ್ಯವಕೊಟ್ಟು ವೇಳೆವೇಳೆಗೆ ಬರಹೇಳಿದ"– ಅಷ್ಟೇ ಅಲ್ಲದೆ–

"ಪುಟ್ಟಪುಟ್ಟ ಕೈಯ ಗಟ್ಟಬೆಣ್ಣೆಯ ಮುದ್ದೆ ಎಷ್ಟು ಬೇಕೆಂದರೆ ಬಟ್ಟಕುಚಂಗಳ ಮುಟ್ಟಿ ಕೈಲಿ ಪಿಡಿದು ಇದರಷ್ಟು ಬೇಕೆಂದನೆ"–ಎಂದು ಇದ್ದಕ್ಕಿದ್ದ ಹಾಗೆ ಹೇಳಿಬಿಡುತ್ತಾಳೆ.

'ನಿನ್ನ ಕಂದಗೆ ಸ್ವಲ್ಪಾದರೂ ಬುದ್ಧಿಹೇಳು' ಎಂದು ಹಲವಾರು ಸಖಿಯರು ಹಲವು ವಿಧದಲ್ಲಿ ಶ್ರೀಕೃಷ್ಣನ ಬಗ್ಗೆ ದೂರಿಕೊಂಡದ್ದನ್ನು ದಾಸವಾಣಿಯಲ್ಲಿಯೇ ನೋಡಿ, ಕೇಳಿ ಆನಂದಿಸಿ ಅದರಲ್ಲಿರುವ ಶೃಂಗಾರ ರಸರೂಪವಾದ ಭಕ್ತಿರಸವನ್ನು ಸವಿಯಬೇಕು.

"ಚಪ್ಪರ ಮಂಚದ ಮೇಲೆ ತಪ್ಪಿ ನಾ ಮಲಗಿರೆ
ಸಪ್ಪಳವಾಗದ್ಹಾಗೆ ಬಂದು ಅಪ್ಪಿಕೊಂಡನೆ
ಕುಪ್ಪಸದಲಿ ಕೈಯನಿಕ್ಕಿ ಕಕ್ಕಸಕುಚಗಳ
ಪಿಡಿದು
ತಪ್ಪುಕಾರ್ಯಮಾಡಿ ಅಧರ ಚಪ್ಪರಿಸಿ ಪೋದ
ನಮ್ಮ"

"ಉಟ್ಟ ಸೀರೆಗಳನೆಲ್ಲ ಕಟ್ಟಿ ಇಟ್ಟು ಜಲದೊಳು
ನೆಟ್ಟನೆ ಇಳಿಯಲು ನಾವು ತಟ್ಟನೆ ತೆಗೆ
ದೋಡಿದ"

"ಕಂಡಕಂಡಲ್ಲಿ ಎನ್ನ ಗಂಡನಂದದಲಿನೋಡಿ
ಭಂಡುಗೇಡು ಮಾಡಿದನು ಪುಂಡ ನಿನ್ನ
ಮಗನಮ್ಮ"

"ನೆಲುವಿಗೆ ಹಾಲು ನಿಲುಕಿ ಸೇರಿಸುವಾಗ
ಮೊಲೆಗೆ ಕೈ ಚಾಚಿದನೆ
ಹೊಟ್ಟೆಮೇಲ್ಲಿನೆ ಸನ್ನೆ ಮಾಡಿಕರೆವ ಈ ಬುದ್ಧಿ
ಒಳ್ಳೇದೇನೆ ಗೋಪಿ
ಮುದ್ದು ಮಾಡಿ ಸಾಕಿ ಮಗನಿಗೆ ಬಸವನ
ಮುಪ್ಪೆಯು ಒತ್ತಿದ್ಯೇನೇ ?"

— ಎಂಬುದಾಗಿ ಗೋಕುಲದ ಒಬ್ಬೊಬ್ಬ ಸ್ತ್ರೀಯೂ ಪರಿಪರಿಯಿಂದ ಕೃಷ್ಣನನ್ನು ಮೂದಲಿಸಿ ಚಾಡಿ ಹೇಳತೊಡಗಿದಾಗ, ತನ್ನ ಮಗನ ಮೇಲಿರುವ ಮಮತೆ ಪುತ್ರವಾತ್ಸಲ್ಯದಿಂದ ತುಂಬಿ ತುಳುಕುತ್ತಿರುವ ಯಶೋದೆಯು ಹಿಂದುಮುಂದು ವಿಚಾರ ಮಾಡದೆ ರೊಚ್ಚಿಗೆದ್ದು —

"ಆಳಿಗೊಂದು ಮಾತಹೇಳಿ ನೀವು ಅಡಿ
ಕೊಂಬಿರೆ ಕೃಷ್ಣನ
ಆಳುವ ನಿಮ್ಮ ಗಂಡರಿಗೆ ನಾಚಿಕೆಯಿಲ್ಲ
ಗೂಳಿ ಬಿಟ್ಟರೆ ನಿಮ್ಮನು ಸ್ತ್ರೀಯರನು ?

ಎಂದು ಅವರಿಗೆ ಮರು ಸವಾಲು ಹಾಕಿ ತನ್ನ ಮಗನನ್ನೇ ಮೇಲುಗಟ್ಟುತ್ತಾಳೆ. ಯಶೋದೆಯ ಮಾತಿನಿಂದ ಲಜ್ಜಿತರಾದ ಸ್ತ್ರೀಯರು ಮರು ಮಾತಾಡದೆ ಹಿಂದಿರುಗುವಷ್ಟರಲ್ಲಿ, ಇನ್ನೊಂದು ಸ್ತ್ರೀಯರ ತಂಡ ಚಾಡಿ ಹೊತ್ತುಕೊಂಡು ಬಂದು "ಕೃಷ್ಣನ ಉಪಟಳವ ತಾಳಲಾರೆವಮ್ಮ" ಎಂದು ಒಬ್ಬೊಬ್ಬರಾಗಿ ಹೇಳ ತೊಡಗುತ್ತಾರೆ.

ಒಬ್ಬ ಹಾಲು ಮಾರುವ ಸ್ತ್ರೀ ಬಹು ಬೇಸತ್ತು –

ಸಿಕ್ಕ ಮನೆಮನೆ ಹೊಕ್ಕು ನೋಡುವನೇ
ತಾ ಸಿಕ್ಕದಿರನು
ತಕ್ಕ ಕಳ್ಳಿವ ಠಕ್ಕನಾಗಿಹನು ।
ಅಕ್ಕಕೇಳೆ ಅಕ್ಕರದಿ ಕೈಮಿಕ್ಕಿ
ಕಡೆದಿಹ ಚೊಕ್ಕ ಬೆಣ್ಣೆಯ ಚಿಕ್ಕಬಾಲರಿಗಿಕ್ಕಿ
ತಿನ್ನುವ

ಶ್ರೀ ಪ್ರಹ್ಲಾದಾಚಾರ್ಯಜೋಷಿ

ಮಿಕ್ಕ ಜೆಕ್ಕೆ ಯ ಬೆಕ್ಕಿಗ್ಯಾಕುವ"–
ಅಷ್ಟೇ ಅಲ್ಲ;

"ಎಂಥನಿವ ಖಳರಂತೆ ಮಾಡುವನೇ ಜೇಕಂತೆ
ಕರುಗಳ
ತುಂತು ಬಿಚ್ಚಿ ನಿಂತು ನೋಡುವನೇ
ಅಂಥ ಇಂಥವನಲ್ಲ ನಿನ್ನಮಗ, ಸಂತಜನ
ಮನದಂತರಂಗನು
ಕಾಂತೆಯರು ಮನದಂತೆ ಬೈದರೆ ನಿಂತು
ನಗುವಾನಂತಾದ್ರೀಶನು"

–'ಎಷ್ಟು ಆಟ್ಗಲೆ ಕೊಡುವ ನೋಡಮ್ಮ ನಿನ ಮಗ'ನೆಂದು ದೂರುತ್ತಾಳೆ.

"ಕೃಷ್ಣನ ಕಾಟ ತಾಳಲಾರೆನಮ್ಮಾ ನಂದನ ರಾಣಿ, ನಿನ್ನ ಮುಂದೆ ಹೇಳಬಾರದಂಥ ಆಟವಾಡಿ ನಮ್ಮನ್ನು ತಲೆ ಎತ್ತದಂತೆ ಮಾಡುತ್ತಿದ್ದಾನೆ" ಎಂದು ಬೇರೆ ಬೇರೆ ಓಣಿಯ ಸ್ತ್ರೀಯರು ಸಾಮೂಹಿಕವಾಗಿ ಅನ್ನುತ್ತಾರೆ.

ಮುದ್ದಿನ ಮೋಹಿಯೊಳಿದ್ದ ಮುಕುಂದನ
ಗದ್ದ ಪಿಡಿದು ನಾವ್ ಮುದ್ದ ನೀಡಿದರೆದೆ
ಲಿದ್ದ ನಿಬಿಡಕುಚ ಹೊದ್ದಪ್ಪಿಬಿಡನಾ
ಮಪ್ಪಿಕಾಯಿ ಮಗುವಿಗೆ ಬುದ್ಧಿ ಯಿದೋಕೆ ?

ಗಡಿಗೆ ಸಹಸ್ರಗಳೊಡೆವ ನಿರಂತರ
ತುಡುಗಿಲಿ ಬಲ್ಲಿದ ಹುಡುಗೇರಕೆಡಿಸಿದ
ಅಡಿಗಡಗಡಗುವ ಹುಡುಕಿ ಹಿಡಿದು ತರೆ
ಮಡದೇರ ಒಡ ನಡುವಡರದೆ ಬಿಡಿವಾ ।

ಶಿಶುಗಳ ಶಿಖವನು ಪಶುಗಳ ಬಾಲಕೆ
ಹೊಸೆದು ಗಂಟನು ಮಿಸುಳಿಸಿಕಟ್ಟುವ
ನೆಸುನಗೆಯಲಿ ನಮಗುಸುರುವ ಸಿಮ್ಮಯ
ಹಸುಳರ ಪಡಿಪಾಟಲ ನೋಡೆನುವ ।

– ಎಂದು ಗೋಪಿಕಾಸ್ತ್ರೀಯರು ಒಟ್ಟಾಗಿ ಬಂದು ಕೃಷ್ಣನ ತುಂಟತನದ ಗುಟ್ಟನ್ನು ರಟ್ಟು ಮಾಡುತ್ತಾರೆ. ಹೀಗೆ ಕೃಷ್ಣನ ಬಗ್ಗೆ ಚಾಡಿಹೇಳಿದ ಬಹುಮತಕ್ಕೆ ಬೆಂಬಲಕೊಟ್ಟು, ಆ ಸ್ತ್ರೀಯರ ಆರೋಪಕ್ಕೆ ಬೆಲೆಕೊಟ್ಟು ತನ್ನ ಪುತ್ರವ್ಯಾಮೋಹವನ್ನು ಬಿಟ್ಟ ಯಶೋದೆಯು ಕೃಷ್ಣನನ್ನು ಹಗ್ಗದಿಂದ ಕಟ್ಟಿ ದಂಡಿಸಲು ಹೋಗುತ್ತಾಳೆ. ಆದರೆ ಕೃಷ್ಣನ ಮಾಯಾಜಾಲದಿಂದ ಅವನಿಗೆ ಪೂರ್ತಿಯಾಗಿ ಕಟ್ಟುವಷ್ಟು ಹಗ್ಗವೇ ಸಿಗದಂತಾಗುತ್ತದೆ. ತನ್ನ ಕಂದನಿಗೆ ಇಂಥ ಗಯ್ಯಾಳಿಗಳ ಮಾತುಕೇಳಿ ವ್ಯರ್ಥದಂಡಿಸಿದೆನಲ್ಲ ಎಂದು ವ್ಯಥೆಬಟ್ಟು ಕೃಷ್ಣನನ್ನು ಬಿಗಿದಪ್ಪಿ ಮುದ್ದಾಡುತ್ತಾಳೆ.

ಗೋಕುಲದ ಸಮಸ್ತ ನಾರಿಯರು ಕೃಷ್ಣನ ಬಗ್ಗೆ ಇಷ್ಟೊಂದು ಚಾಡಿ ಹೇಳಿದರೂ, ಆ ಕೃಷ್ಣನಿಲ್ಲದೆ ಒಂದರಘಳಿಗೆಯಾದರೂ ಇರಲು ಸಾಧ್ಯವಿರಲಿಲ್ಲ. ಕೃಷ್ಣನ ಅಂಗಸಂಗದಿಂದ ಪುನೀತರಾಗಬೇಕೆನ್ನುವ ಉತ್ಕಟ ಆಸೆ ಅವರಿಗೆ. ತಮ್ಮ ಪತ್ಯಂತರ್ಗತ ಪರಮಾತ್ಮನೇ ಶ್ರೀ ಕೃಷ್ಣನೆಂದು ನಂಬಿದ ಗೋಪಿಕಾಸ್ತ್ರೀಯರ ಶೃಂಗಾರರಸವೇ ಭಕ್ತಿ ಎನಿಸಿ ಮುಕ್ತಿಗೆ ಕಾರಣವಾಯಿತು. ಕೃಷ್ಣನ ಮೇಲಿರುವ ಅವರ ನಿರ್ವ್ಯಾಜ, ನಿಷ್ಕಲ್ಮಷ, ಶುದ್ಧಾಂತಃಕರಣದ ನಿಷ್ಕಾಮ ಪ್ರೀತಿ ಎಷ್ಟೆಂಬುದನ್ನು ನಾವು ದಾಸಸಾಹಿತ್ಯದಿಂದಲೇ ತಿಳಿದುಕೊಳ್ಳಬಹುದು.

"ಕಾಮನಯ್ಯನ ಕಾಮಿನಿಯರ ಕಾಮುಕ ಭಕ್ತಿಯೇ ಮುಕ್ತಿ"– ಎಂದು ದಾಸರು ಸಾರಿ ಹೇಳಿದ್ದಾರೆ. ಗೋಪಿಕಾಸ್ತ್ರೀಯರ ಭಕ್ತಿ ಎಂತಹದು ? –

"ಕಣ್ಣಲಿ ರಂಗನ ಮೂರ್ತಿ ಕರಣಗಳಿಗೆ ಅವನ
ವಾರ್ತೆ
ಮನ್ನವು ಧ್ಯಾನಾನ್ವಿತ ಕೀರ್ತನೆ ಜಿಹ್ವೆಗೆ
ಕನ್ಯೆಯರು ಧನ್ಯರು ಪಾವನ್ನೆಯರು ಚಿನ್ಮಯ
ಪ್ರಸನ್ನವೆಂಕಟ ಮಾನ್ಯೆಯರು ಪುಣ್ಯ
ಶಾಲೆಯರು"

ಎಂಬುದಾಗಿ ದಾಸರು ಗೋಪಿಕಾಸ್ತ್ರೀಯರ ಭಕ್ತಿಯ ಪರಾಕಾಷ್ಠತೆಯ ಬಗ್ಗೆ ಕೊಂಡಾಡಿದ್ದಾರಲ್ಲದೆ, ಅವರು ಕೃಷ್ಣನ ಮೇಲೆ ಜಾರತೆಯ ಮೂಲಕ ಶೃಂಗಾರರಸವನ್ನು ಸ್ರವಿಸಿರುವುದೇ ಭಕ್ತಿ. ಆದುದರಿಂದ ಅವರಿಗೆ ಮುಕ್ತಿ ಆಯಿತೆಂದು ಸಾರಿದ್ದಾರೆ.

ಕೃಷ್ಣನೊಡನೆ ಸದಾ ರಾಸಕ್ರೀಡೆಯಾಡಬೇಕೆನ್ನುವ ಹಂಬಲವುಳ್ಳ ಗೋಪಿಯರು ಕೃಷ್ಣನಿಗಾಗಿ ಎಂಥ ತ್ಯಾಗಮಾಡಿದರು ? ಎನ್ನುವದಕ್ಕೆ–

ಬಿಟ್ಟ ಮುಡಿಗಳ ಕಟ್ಟಲಿಲ್ಲವರು ಉಟ್ಟಂಬರ
ಹೊಂದರು
ಇಟ್ಟಡಿಕುಚದ ಪಟ್ಟಿಕೆ ಕಾಣರು ಗಟ್ಟ್ಯಾಗಿ
ಬೆರೆತರು
ದೇಹೇಂದ್ರಿಯ ಪ್ರಾಣ ಶ್ರೀಹರಿಗರ್ಪಿಸಿ
ಬಾಹ್ಯಾರ್ಥವಂ ಮರೆದ
ಸ್ನೇಹಕ್ಕೆ ಮೆಚ್ಚಿದ ಆ ಹೆಂಗಳೌಘದ ಸಾಹಸ
ಕೊಪ್ಪಿದ

–ಎಂದಿದ್ದಾರೆ.

ಕಾಮಾರ್ದಿತರಾದ ಕಾಮಿನಿಯರಿಗೆ ಕೃಷ್ಣನು ಹೇಗೆ ಕಾಮ ಪೂರೈಸಿದನೆಂಬ ವರ್ಣನೆಯು ದಾಸಸಾಹಿತ್ಯದಲ್ಲಿ ವಿಪುಲವಾಗಿ ಹೊರೆಯುತ್ತವೆ.

ಕೃಷ್ಣ ತನ್ನ ಮನೆಗೇ ಬರಬೇಕು. ತನ್ನ ಮನೋರಥವನ್ನು ಪೂರೈಸಬೇಕು. ಆದರೆ ಸದ್ದುಗದ್ದಲಮಾತ್ರ ಆಗಬಾರದೆಂಬ ಆಪೇಕ್ಷೆ ಒಬ್ಬ ಸ್ತ್ರೀಗೆ.

ಸದ್ದುಮಾಡಲು ಬೇಡವೋ ನಿನ್ನ ಕಾಲಿಗೆ
ಬಿದ್ದು ನಾ ಬೇಡಿಕೊಂಬೆ
ನೆರಿಗೆ ಕೈಹಾಕದಿರೊ ಕಾಂಚಿಯಧಾಮ
ಉಡಿಗಂಟು ಧ್ವನಿಗೈಯದೇ
ಕೆಳದುಟಿಯನು ನೀಸವಿದು ಚಪ್ಪರಿಸಲು
ತರವಲ್ಲ
ಗಂಡ ಮತ್ಸರ ತಾಳುವನಲ್ಲ

ಎಂಬುದಾಗಿ ತನ್ನ ಗಂಡನ ಅಂಜಿಕೆಯನ್ನು ತೋರ್ಪಡಿಸಿದ ಸ್ತ್ರೀಯ ಸೆರಗನ್ನು ಕೃಷ್ಣ ಹಿಡಿದೆಳೆದಾಗ ತನ್ನ ಭಯ ಆತಂಕವನ್ನು ಹೀಗೆ ವ್ಯಕ್ತಪಡಿಸುತ್ತಾಳೆ.

ಮಾವಕಂಡರೆ ಎನ್ನ ಜೀವ ಬಿಡನೊ ಹರಿಯೆ

( 25 ವೇ ಪುಟ ನೋಡಿ )

# ರಸಿಕನಾದದ ಮಾತು.

ಮೂರ್ಕರಲ್ಲದವರಿಗೆಲ್ಲ ಮಾತು ಬಂದರೂ ಮಾತನಾಡುವವರೆಲ್ಲ ವಾಗ್ಮಿಗಳಲ್ಲ. "ವಕ್ತಾ ದಶ ಸಹಸ್ರೇಷು"– 'ಹತ್ತು ಸಾವಿರಕ್ಕೊಬ್ಬ ಉತ್ತಮ ಮಾತಗಾರನು ದೊರಕುತ್ತಾನೆ' ಎಂಬ ಮಾತೂ ಮಾತಿನ ಆಳವನ್ನು ತಿಳಿಸುತ್ತದೆ. ನೃಪತುಂಗನ ಮಾತಿನಂತೆ ಜಾಣನ ಮಾತಿನ ರಹಸ್ಯ "ಕಿರಿದರೊಳು ಪಿರಿದರ್ಥಂ" ಎಂಬುದೇ ಆಗಿದೆ. "Brevity is the soul of wit" (Hamlet) – "ಸಂಕ್ಷಿಪ್ತತೆ ವಾಗ್ವೈದಗ್ಧ್ಯದ ಪ್ರಾಣ" ಎನ್ನುತ್ತಾನೆ ಶೇಕ್ಸ್‌ಪಿಯರ್. ಒಂದು ಕಲ್ಲನ್ನು ಭಾವಿಯಲ್ಲಿ ಎಸೆದಾಗ ಅನೇಕ ತರಂಗಗಳು ಏಳುವಂತೆ ಮಿತವಾದ ಮಾತಿನಲ್ಲಿ ಅಪರಿಮಿತವಾದ ಅರ್ಥ ತುಂಬಿರಬೇಕು. ಇದಕ್ಕೆ ಸಂಸ್ಕೃತ ಸಾಹಿತ್ಯದ 'ಸುಭಾಷಿತ'ಗಳು ನಿದರ್ಶನವಾಗಿವೆ. "ಕಿರಿದರೊಳು ಪಿರಿದರ್ಥಂ" ಎಂಬುದೇ ಸುಭಾಷಿತಗಳ ಪ್ರಮುಖ ಲಕ್ಷಣ. ಅಂತಹ ಕೆಲವು ಮಾತುಗಳನ್ನು ಇಲ್ಲಿ ವಿವರಿಸುವ ಉದ್ದೇಶ. ಸಂಸ್ಕೃತ ಸಾಹಿತ್ಯದಲ್ಲಿ ಅಭಿರುಚಿ ಮೂಡಿಸುವುದಾಗಿದೆ.

ಅನ್ಯೋಕ್ತಿ : ಲೋಕರೀತಿ ನೀತಿಗಳ ಉಪದೇಶವನ್ನು ನೇರವಾಗಿ ಮಾಡಿದರೆ ಅದರಲ್ಲೂ ಮೂರ್ಖರಿಗಂತೂ ವಿಪರೀತ ಸಿಟ್ಟು. ಇದನ್ನೇ "ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ನ ಶಾಂತಯೇ" ಎಂದು ಹೇಳಲಾಗಿದೆ. ಮತ್ತೆ ಕೆಲವರನ್ನು ತಿದ್ದಲು ಪರೋಕ್ಷವಾಗಿಯಾದರೂ ಉಪದೇಶದ ಮಾತನ್ನು ಹೇಳಬೇಕಾಗುತ್ತದೆ. ಆದ್ದರಿಂದ ಹೇಳಬೇಕಾದ ಉಪದೇಶವನ್ನು ನೇರವಾಗಿ ಹೇಳದೆ ಗಿರಿ, ನದಿ, ಸಸ್ಯ, ಪಶು, ಪಕ್ಷಿ ಮುಂತಾದುವುಗಳ ಮೂಲಕ ಹೇಳಲಾಗುತ್ತದೆ. ಇಂಥವುಗಳಿಗೆ 'ಅನ್ಯೋಕ್ತಿ'ಗಳೆಂದು ಹೆಸರು. ಇವುಗಳು ಪಂಡಿತ, ಪಾಮರ – ಈರ್ವರ ಮೇಲೂ ಪರೋಕ್ಷವಾಗಿ ಪರಿಣಾಮ ಬೀರುತ್ತವೆ. ಇವೂ ಸುಭಾಷಿತಗಳ ಒಂದು ಪ್ರಮುಖ ಭಾಗವೆನಿಸಿವೆ.

"ನಿರಸ್ತ ಪಾದಪೇ ದೇಶೇ
ಏರಂಡೋಽಪಿ ದ್ರುಮಾಯತೇ"

ಅಲ್ಪ ವಿದ್ಯೆ ಇರುವವನಿಗೆ ಹೆಚ್ಚಿನ ಗೌರವ ಸ್ಥಾನಮಾನಗಳು ದೊರೆಯುವುದಿಲ್ಲ. ಆದರೆ ಅವಿದ್ಯಾವಂತರಿರುವ ಸ್ಥಳದಲ್ಲಿ ಒಬ್ಬನೇ ಇರುವ ಅಂತಹ ಅಲ್ಪ ವಿದ್ಯೆಯ ವ್ಯಕ್ತಿಗೇ ಅಪಾರ ಗೌರವ. ಹಲವಾರು ಸನ್ನಿವೇಶಗಳಲ್ಲಿ ಅಯೋಗ್ಯರಿಗೆ ದೊರೆಯಬಹುದಾದ ಸ್ಥಾನಮಾನಗಳನ್ನು ಈ ಮಾತಿನಿಂದ ಹೇಳುತ್ತಾರೆ. ಮರಗಳೇ ಇಲ್ಲದಿರುವ ಸ್ಥಳದಲ್ಲಿ ಹರಳು (ಜಾಡಲ) ಗಿಡವೇ ದೊಡ್ಡ ಮರವೆನಿಸುತ್ತದೆ. "ಅಳಿದ ಊರಿಗೆ ಉಳಿದವನೇ ಗೌಡ" ಎನ್ನುವ ಮಾತು ಇದೇ ಅರ್ಥವನ್ನೇ ನೀಡುತ್ತದೆ.

ಪಕ್ವಂ ಚೂತಫಲಂ ಭುಕ್ತ್ವಾ
ಗರ್ವಂ ನಾಯಾತಿ ಕೋಕಿಲಃ ।
ಪೀತ್ವಾ ಕರ್ದಮ ಪಾನೀಯಂ
ಭೇಕೋ ರಟರಟಾಯತೇ ॥

ಮಾಗಿದ ಮಾವಿನ ಹಣ್ಣನ್ನು ತಿಂದರೂ ಕೋಗಿಲೆಯು ಅಹಂಕಾರ ಪಡುವುದಿಲ್ಲ. (ಇಂಪಾಗಿ ಹಾಡುವುದೇ ವಿನಃ ಅಹಂಕಾರ ಸೂಚಕ ಗಡುಸು ಧ್ವನಿಯನ್ನು ಹೊಂದುವುದಿಲ್ಲ.) ಆದರೆ ಕಪ್ಪೆ ಕೆಸರು ನೀರು ಕುಡಿದರೂ ರಟರಟ ಎಂದು ವಟಗುಟ್ಟಿದೆ. ಅಲ್ಪರಿಗೆ ಅಧಿಕಾರ ಬಹಳ ಸಂಪತ್ತು ಬಂದರೆ ಅವರು ಅಹಂಕಾರ ಪಡುತ್ತಾರೆ. ಆದರೆ ಮಹಾತ್ಮರು ಎಷ್ಟೇ ಸಂಪತ್ತು ಇದ್ದರೂ ಅಹಂಕಾರ ಪಡುವುದಿಲ್ಲ. 'ಅಲ್ಪ ವಿದ್ಯೋ ಮಹಾಗರ್ವೀ', 'ಸಂಪೂರ್ಣ ಕುಂಭೋ ನ ಕರೋತಿ ಶಬ್ದಂ' ತುಂಬಿದ ಕೊಡ ತುಳುಕುವುದಿಲ್ಲ– ಮುಂತಾದ ಮಾತುಗಳೂ ಇದೇ ಮಾದರಿಯವುಗಳು.

ಕಾಕಃ ಕೃಷ್ಣಃ ಪಿಕಃ ಕೃಷ್ಣಃ
ಕೋ ಭೇದಃ ಪಿಕಕಾಕಯೋಃ ।
ವಸಂತಕಾಲೇ ಸಂಪ್ರಾಪ್ತೇ
ಕಾಕಃ ಕಾಕಃ ಪಿಕಃ ಪಿಕಃ ॥

ಪಂಡಿತರಂತೆ ಶೂರರಂತೆ ನಟಿಸಿದರೆ ಅವರು ತಾತ್ಕಾಲಿಕವಾಗಿ ಹಾಗೆ ಕಾಣಬಹುದು. ಆದರೆ ವಿದ್ವತ್ಸಭೆ ವಾಕ್ಯಾರ್ಥ ಗೋಷ್ಠಿ ಹಾಗೂ ರಣರಂಗ ಮುಂತಾದ ಸಂದರ್ಭಗಳಲ್ಲಿ ಆ ಪ್ರಸಂಗಗಳನ್ನು ಎದುರಿಸಲಾರದೆ ಪಂಡಿತರಂತೆ ಶೂರರಂತೆ ನಟಿಸುವವರ ಗುಟ್ಟು ಬಯಲಾಗುತ್ತದೆ. ಈ ವಿಚಾರವನ್ನು ಈ ಮೇಲಿನಂತೆ ಹೇಳಲಾಗುತ್ತದೆ. ಕಾಗೆಯು ಕಪ್ಪು ಕೋಗಿಲೆಯು ಕಪ್ಪು; ಇವುಗಳಲ್ಲಿಯ ಅಂತರವೇನು? ಅಂತರವೇನೂ ಇಲ್ಲವೆಂದು ಹೇಳಲಾಗದು. ಕಾಗೆಗೆ ಕೋಗಿಲೆಯಂತೆ ಬಣ್ಣವಿದ್ದರೂ ಇಂಪಾದ ಧ್ವನಿ ಇಲ್ಲದಿರುವುದರಿಂದ ವಸಂತಕಾಲ ಬಂದಾಗ ಕಾಗೆ ಕಾಗೆಯೇ, ಕೋಗಿಲೆ ಕೋಗಿಲೆಯೇ ಎನ್ನುವುದು ಸ್ಪಷ್ಟವಾಗುತ್ತದೆ.

ಶ್ರೀ ಆರ್. ಗುರುರಾಜಗುಡಿ, ಬಿ.ಎ.

ಶ್ಲೇಷಾರ್ಥ ಸಾರಸ್ಯ : ಒಂದೇ ವಾಕ್ಯವು ಎರಡು ರೀತಿಯ ಅರ್ಥ ಕೊಡುವುದಕ್ಕೆ ಶ್ಲೇಷಾರ್ಥಕ ಮಾತುಗಳು ಎನ್ನುತ್ತಾರೆ. ಇವು ಸಂಸ್ಕೃತ ಸಾಹಿತ್ಯದ ಒಂದು ವೈಶಿಷ್ಟ್ಯವೆಂದು ಹೇಳಬಹುದು.

ಕಂ ಬಲವಂತಂ ಶೀತಂ ನ ಬಾಧತೇ?

ಯಾವ ಬಲಶಾಲಿಯನ್ನು ಛಳಿಯು ಬಾಧಿಸುವುದಿಲ್ಲ? ಎನ್ನುವ ಪ್ರಶ್ನೆಗೆ ಇದೇ ವಾಕ್ಯವೇ ಉತ್ತರಿಸುತ್ತದೆ.

'ಕಂಬಲವಂತಂ ಶೀತಂ ನ ಬಾಧತೇ' ಎಂದು ಕೂಡಿಸಿ ಓದಿದಾಗ ಕಂಬಳಿಹೊತ್ತವನನ್ನು ಛಳಿಯು ಬಾಧಿಸುವುದಿಲ್ಲ ಎಂದಾಗುತ್ತದೆ ಆ ವಾಕ್ಯದ ಅರ್ಥ.

"ಸರ್ವದೋ ಮಾಧವಃ ಪಾಯಾತ್
ಯೋಽಗಂಗಾಮುದೀಧರತ್"

(ಕೃಷ್ಣಾವತಾರ ಮತ್ತು ವರಾಹಾವತಾರ ಕಾಲದಲ್ಲಿ ವಿಷ್ಣುವು ಗೋವರ್ಧನ ಪರ್ವತ

ಹಾಗೂ ಭೂಮಿಯನ್ನು ಎತ್ತಿದ್ದಾನೆ.) 'ಪರ್ವತ ಹಾಗೂ ಭೂಮಿಯನ್ನು ಎತ್ತಿದ ಎಲ್ಲವನ್ನೂ ನೀಡುವ ಲಕ್ಷ್ಮೀಪತಿಯಾದ ಶ್ರೀಹರಿಯು ಕಾಪಾಡಲಿ' ಎಂದು ವಿಷ್ಣು ಪರವಾಗಿ ಈ ವಾಕ್ಯವನ್ನು ಹೇಳಿದರೆ, ಇದೇ ಮಾತನ್ನು ಶಿವನ ಪರವಾಗಿಯೂ ಅರ್ಥೈಸಲು ಬರುತ್ತದೆ.

ಇದೇ ವಾಕ್ಯವನ್ನು ಒಟ್ಟು ಗೂಡಿಸಿ 'ಸರ್ವದಾ ಉಮಾಧವಃ ಪಾಯಾತ್ ಯೋ ಗಂಗಾಂ ಅದೀಧರತ್' ಎಂದು ಪದಚ್ಛೇದ ಮಾಡಿದಾಗ "ಗಂಗೆಯನ್ನು ಧರಿಸಿದಪಾರ್ವತೀಪತಿಯಾದ ಪರಮೇಶ್ವರನು ಯಾವಾಗಲೂ ರಕ್ಷಿಸಲಿ"ಎಂದೂ ಹೇಳಬಹುದು.

ಕೂಟ ಶ್ಲೋಕಗಳು : ಕೆಲವು ಪದ್ಯಗಳು ಮೇಲ್ನೋಟಕ್ಕೆ ಅಪಾರ್ಥ, ತಪ್ಪು ಕಲ್ಪನೆಯ ಅರ್ಥ ಕೊಡುತ್ತಿರುವಂತೆ ತೋರುತ್ತವೆ. ಮತ್ತೆ ಕೆಲವು ಪದ್ಯಗಳಲ್ಲಿ ಅರ್ಥವಿಲ್ಲದ ಶಬ್ದಗಳನ್ನು ಸುಮ್ಮನೆ ಬಳಸಲಾಗಿದೆ ಎಂದೂ ಕಾಣುವುದುಂಟು. ಆದರೆ ವ್ಯಾಕರಣ, ಕೋಶ ಮುಂತಾದುವುಗಳ ಸಹಾಯದಿಂದ, ಪದಗಳ ಸರ್ಕಸ್ಸಿನಿಂದ (ಜೋಡಣೆ ವಿಂಗಡಣೆಗಳ ವೈವಿಧ್ಯತೆಯಿಂದ) ಅವು ಸರಿಯಾಗಿಯೇ ಇರುತ್ತವೆ ಎಂಬುದನ್ನು ಮನಗಾಣಬಹುದು. ಇಂತಹ ಪದ್ಯಗಳನ್ನು ಕೂಟ ಶ್ಲೋಕಗಳೆಂದು ಕರೆಯಲಾಗಿದೆ. ಕವಿಗಳ ವೈಶಿಷ್ಟ್ಯ ಪ್ರತಿಭೆಗಳ ಮೂಲಕ ಹೊರ ಹೊಮ್ಮಿದ ಜಾಣ್ಮೆ, ಪ್ರತಿಭೆ ಮಡುಗಟ್ಟಿ ನಿಂತ ಈ ಪದ್ಯಗಳನ್ನು ಸಂಸ್ಕೃತದ ಅಪೂರ್ವ ಹಾಗೂ ವೈಶಿಷ್ಟ್ಯ ಪೂರ್ಣ ಸಾಹಿತ್ಯವೆಂದು ಹೇಳಬಹುದು.

ಕೇಶವಂ ಪತಿತಂ ದೃಷ್ಟ್ವಾ
ಪಾಂಡವಾ ಹರ್ಷ ನಿರ್ಭರಾಃ |
ರುದಂತಿ ಕೌರವಾಃ ಸರ್ವೇ
ಹಾ ಕೇಶವ ಭುವಂ ಗತಃ ||

ಈ ಪದ್ಯದ ಮೇಲ್ನೋಟದ ಅರ್ಥ ಹೀಗೆ – 'ಕೇಶವ (ಕೃಷ್ಣ) ಯುದ್ಧದಲ್ಲಿ ಉರುಳಿದುದನ್ನು ನೋಡಿ ಪಾಂಡವರು ಸಂತಸಪಟ್ಟರು. ಅಯ್ಯೋ ಕೇಶವ ನೆಲಕ್ಕುರುಳಿದನೆಂದು ಕೌರವರೆಲ್ಲರೂ ಅಳುತ್ತಾರೆ.' ಇದು ಅಸಂಗತವೆಂದು ಮತ್ತೆ ಹೇಳಬೇಕಾಗಿಲ್ಲ. ಇದರ ನಿಜವಾದ ಅರ್ಥ ಹೀಗೆ– ಅರ್ಜುನನು ಜಯದ್ರಥನನ್ನು ತುಂಡರಿಸಿ ರುಂಡವನ್ನು ನೀರಿನಲ್ಲಿ ನಿಂತಿದ್ದ ಅವನ ತಂದೆಯ ಕೈಯಲ್ಲಿ ಬೀಳಿಸುತ್ತಾನೆ. ಆಗ ಕೇ=ನೀರಿನಲ್ಲಿ, ಪತಿತಂ ಶವಂ=ಬಿದ್ದ ಶವವನ್ನು, ಕಂಡು ಪಾಂಡವರು ಸಂತಸಪಟ್ಟರು. (ಜಯದ್ರಥ) ಅಯ್ಯೋ ನೆಲಕ್ಕುರುಳಿದನಲ್ಲ! ಎಂದು ಕೌರವರೆಲ್ಲರೂ ಅಳುತ್ತಾರೆ.

ವಿಷಂ ಭುಂಕ್ಷ್ವ ಮಹಾರಾಜ
ಸ್ವಜನೈಃ ಪರಿವಾರಿತಃ |
ವಿನಾ ಶೇನ ವಿನಾ ನಾಭ್ಯಾಂ
ಕೃಷ್ಣಾಜನ ಮುಕಂಟಕಂ ||

ಮಹಾರಾಜನೇ, ಬಂಧುಗಳಿಂದ ಕೂಡಿ ವಿಷವನ್ನು ಸೇವಿಸು ... ... ಹೀಗೆ ಮೇಲ್ನೋಟದ ಅರ್ಥ. ಹೀಗೆ ಅರ್ಥ ಹೇಳಿದರೆ ನಮಗೆ ಅನರ್ಥವಾಗುವುದರಲ್ಲಿ ಸಂದೇಹವಿಲ್ಲ. ಇದರ ನಿಜವಾದ ಅರ್ಥ ಬೇರೆ– ವಿಷಂ – ಷಕಾರ ತೆಗೆದರೆ, ಶ, ನ ಅಕ್ಷರ ತೆಗೆದರೆ ಅಂದರೆ 'ಕೃಷ್ಣಾಜನಂ' ಎಂಬಲ್ಲಿ ಕ್, ಷ್, ನ್ ಅಕ್ಷರ ತೆಗೆದರೆ ಋ, ಆ, ಜ, ಅಂ ಎಂದು ಉಳಿದು ಸಂಧಿಯಾಗಿ ರಾಜ್ಯಂ ಎಂದಾಗುತ್ತದೆ. 'ಹೇ ಮಹಾರಾಜನೇ, ಪರಿವಾರದಿಂದ ಕೂಡಿ ನಿಷ್ಕಂಟಕವಾದ (ತೊಂದರೆ ಇಲ್ಲದ) ರಾಜ್ಯವನ್ನು ಆಳು 'ಎಂದಾಗುತ್ತದೆ.

ಶಿಲಾರ್ಪಿತ ಪದದ್ವಂದ್ವಾ
ನಾಸಾರ್ಪಿತ ಕರದ್ವಯಾ |
ಅಭೂದ್ವ್ಯಕ್ತಸ್ತನೀ ನಾರೀ
ಕಥಮೇ ತದ್ಭವಿಷ್ಯತಿ ||

ಕಲ್ಲ ಮೇಲೆ ಕಾಲಿರಿಸಿ ಮೂಗಿನ ಮೇಲೆ ಕೈ ಇರಿಸಿ ನಿಂತ ನಾರಿಯು ಸ್ಪಷ್ಟವಾಗಿ ವ್ಯಕ್ತವಾಗುವ ಸ್ತನವುಳ್ಳವಳಾಗುತ್ತಾಳೆ. ಆದರೆ ಇದು ಹೇಗೆ ಸಾಧ್ಯ ? ಕಲ್ಲ ಮೇಲೆ ನಿಲ್ಲುವ ಔಚಿತ್ಯವೇನು? ಎಂದು ಮುಂತಾಗಿ ಸಮಸ್ಯೆ ಇದಿರಾಗುತ್ತದೆ. ಇದನ್ನು ಪರಿಹರಿಸಬೇಕಾದರೆ ಶಿಲಾ, ನಾಸಾ ಎಂಬುದಕ್ಕೆ ಪ್ರಸಿದ್ಧಾರ್ಥಗಳಿದ್ದರೂ ಪ್ರಕೃತದಲ್ಲಿ "ಅಧಸ್ತಾದ್ದಾರುಣಿ ಶಿಲಾ ನಾಸಾ ದಾರೂಪರಿಸ್ಥಿತಂ" ಎಂಬ ಅಮರಕೊಶದ ಪ್ರಕಾರ ಶಿಲಾ=ಬಾಗಿಲಮೆಟ್ಟು ಹಲಗೆ (ಹೊಸಿಲು) ನಾಸಾ = ಬಾಗಿಲ ಮೇಲೆ ಹಾರದ ಮರ (ಚೌಕಟ್ಟಿನ ಮೇಲ್ಭಾಗ) ಎಂದು ಅರ್ಥ ಮಾಡಬೇಕು.

ಸುವರ್ಣಸ್ಯ ಸುವರ್ಣಸ್ಯ
ಸುವರ್ಣಸ್ಯ ಚ ಜಾನಕಿ |
ಪ್ರೇಷಿತಾ ತವ ರಾಮೇಣ
ಸುವರ್ಣಸ್ಯ ಚ ಮುದ್ರಿಕಾ ||

ಇಲ್ಲಿ ಸುವರ್ಣಸ್ಯ ಎಂಬುದಾಗಿ ಮೂರು ನಾಲ್ಕು ಸಲ ಸುಮ್ಮನೇ ಹೇಳಿದಂತೆ ಕಾಣಿಸುತ್ತದೆ. ಆದರೆ ಅದಕ್ಕೆ ಅರ್ಥ ಇಲ್ಲದಿಲ್ಲ. ಸುವರ್ಣಸ್ಯ = ಸುಂದರ ಅಕ್ಷರಗಳುಳ್ಳ, ಸುವರ್ಣಸ್ಯ = ಎಂಭತ್ತು ರಕ್ತಿಕಾ (ಅಳತೆ ಪ್ರಭೇದ) ಪರಿಮಾಣವುಳ್ಳ, ಸುವರ್ಣಸ್ಯ= ಹೊಳೆಯುವ (ಒಳ್ಳೇ ಬಣ್ಣವುಳ್ಳ), ಸುವರ್ಣಸ್ಯ = ಬಂಗಾರದ ಈ ಉಂಗುರವು, ಹೇ ಸೀತಾದೇವಿಯೇ ರಾಮನಿಂದ ನಿನಗೆ ಕಳಿಸಲ್ಪಟ್ಟಿದೆ. ಇದು ಇಲ್ಲಿ ತಿಳಿಯುವ ಅರ್ಥ.

ಶಂಕರಂ ಪತಿತಂ ದೃಷ್ಟ್ವಾ
ಪಾರ್ವತೀ ಹರ್ಷನಿರ್ಭರಾ |
ರುರುದುಃ ಪನ್ನಗಾಃ ಸರ್ವೇ
ಹಾ ಹಾ ಶಂಕರ ಶಂಕರ ||

'ಶಂಕರ ಉರುಳಿದ್ದನ್ನು ಕಂಡು ಪಾರ್ವತಿ ಸಂತಸಪಟ್ಟಳು. ಹಾವುಗಳೆಲ್ಲವೂ ಅಯ್ಯೋ ಶಂಕರ; ಅಯ್ಯೋ ಶಂಕರ;' ಎಂದು ಅತ್ತವು. ಇದು ಇದರ ಮೇಲ್ನೋಟದ ಅರ್ಥ. ಸರಿಯಾದ ಅರ್ಥ ತಿಳಿಯ ಬೇಕಾದರೆ ಇಲ್ಲಿ ಶಂಕರ, ಪಾರ್ವತೀ ಶಬ್ದಗಳ ಅರ್ಥ ಸರಿಯಾಗಿ ಮಾಡಿಕೊಳ್ಳಬೇಕು, ಶಂಕರ = ಶ್ರೇಷ್ಠ ಗಂಧದ ಮರ, ಪಾರ್ವತೀ = ಪರ್ವತ ಪ್ರದೇಶದಲ್ಲಿ ಓಡಾಡುವ ಬೇಡರ ಸ್ತ್ರೀ. ತಮಗೆ ಆಶ್ರಯವಾಗಿದ್ದ ಗಂಧದ ಮರ ಉರುಳಿತೆಂದು ಹಾವುಗಳಿಗೆ ದುಃಖ. ಹೀಗೆ ಹಿಂದಿನ ಸಮಸ್ಯೆಯನ್ನು ಪರಿಹರಿಸಬಹುದು.

ವಿರಾಜರಾಜ ಪುತ್ರಾರೇಃ
ಯನ್ನಾಮ ಚತುರಕ್ಷರಮ್ |
ಪೂರ್ವಾರ್ಧಂ ತವ ಶತ್ರೂಣಾಂ
ಪರಾರ್ಧಂ ತವ ಸಂಗರೇ ||

ಒಮ್ಮೆಲೇ ಇದರ ಅರ್ಥವೇ ತಿಳಿಯುವುದಿಲ್ಲ. ವಿಃ = ಪಕ್ಷಿಗಳ, ರಾಜನಾದ ಗರುಡನಿಗೆ ರಾಜ = ಒಡೆಯನಾದ ವಿಷ್ಣುವಿನ, ಪುತ್ರ = ಮಗನಾದ ಮನ್ಮಥನ, ಅರಿ = ಶತ್ರುವಾದ ಪರಮೇಶ್ವರ, ಅವನ ನಾಲ್ಕು ಅಕ್ಷರಗಳ ಹೆಸರೆಂದರೆ ಮೃತ್ಯುಂಜಯ. ಆ ಹೆಸರಿನ ಪೂರ್ವಾರ್ಧ 'ಮೃತ್ಯು'ವು ನಿನ್ನ ಶತ್ರುಗಳಿಗಾಗಲಿ, ಆ ಹೆಸರಿನ ಉತ್ತರಭಾಗ 'ಜಯ'ವು ಯುದ್ಧದಲ್ಲಿ ನಿನಗೆ ಉಂಟಾಗಲಿ.

ಶಮೀಗರ್ಭಸ್ಯ ಯೋ ಗರ್ಭಃ
ತಸ್ಯ ಗರ್ಭಸ್ಯ ಯೋ ರಿಪುಃ ।
ರಿಪು ಗರ್ಭಸ್ಯ ಯೋ ಭರ್ತಾ
ಸ ಮೇ ವಿಷ್ಣುಃ ಪ್ರಸೀದತು ॥

ಇಲ್ಲಿ ಮೇಲಿಂದ ಮೇಲೆ ಗರ್ಭ, ಗರ್ಭ ಎನ್ನುವುದೊಂದನ್ನು ಬಿಟ್ಟರೆ ಬೇರೆ ಯಾವ ಅರ್ಥವೂ ಸ್ಪಷ್ಟವಾಗಿ ಗೋಚರಿಸದು ಬನ್ನಿಯ ಮರದೊಳಗೆ ಬೆಂಕಿ ಇರುವುದರಿಂದ 'ಶಮೀಗರ್ಭ' ಎಂದರೆ ಬೆಂಕಿ. ಅದನ್ನು ಒಳಗೆ ಇರಿಸಿಕೊಂಡದ್ದು ನೀರು. (ಸಮುದ್ರದಲ್ಲಿ ವಡವಾಗ್ನಿ ಇರುವುದು) ಅದರ ಶತ್ರು ಬೆಂಕಿ. 'ಬೆಂಕಿಯ ಶತ್ರು' ನೀರು. ಈ ನೀರಿನೊಳಗೆ ಇರತಕ್ಕ ಅರ್ಥಾತ್ ಸಮುದ್ರರಾಜನ ಮಗಳಾದ ಲಕ್ಷ್ಮಿಗೆ ಯಾರು ಪತಿ – ವಿಷ್ಣು, ಅತನು ನನಗೆ ಪ್ರಸನ್ನನಾಗಲಿ.

ತಾತೇನ ಕಥಿತಂ ಪುತ್ರ
ಲೇಖಂ ಲಿಖ ಮಮಾಜ್ಞಯಾ
ನ ತೇನ ಲಿಖಿತೋ ಲೇಖಃ
ಪಿತುರಾಜ್ಞಾ ನ ಲೋಪಿತಾ ॥

ತಾನು ಹೇಳಿದಂತೆ ಬರೆಯಲು ತಂದೆ ಮಗನಿಗೆ ಹೇಳಿದನು. ಅವನು ಪತ್ರವನ್ನು ಬರೆಯಲಿಲ್ಲ. ತಂದೆಯ ಆಜ್ಞೆಯನ್ನೂ ಮೀರಲಿಲ್ಲ. ಇದು ಮೇಲೆ ತೋರಬಹುದಾದ ಅರ್ಥ. ಪತ್ರ ಬರೆಯದಿದ್ದಲ್ಲಿ ತಂದೆಯ ಆಜ್ಞೆ ಉಲ್ಲಂಘನೆಯಾದಂತೆಯೇ ಅಲ್ಲವೆ? ಆದ್ದರಿಂದ ಇದನ್ನು ಹೀಗೆ ಅರ್ಥೈಸದೆ 'ನ ತೇನ' ಎಂಬುದನ್ನು ಬಿಡಿಸಿ ಅರ್ಥಮಾಡದೆ 'ನತೇನ' ಎಂದು ಕೂಡಿಸಿ ಓದಬೇಕು. ಆಗ 'ನತೇನ' = ವಿನಯಶಾಲಿಯಾದ ಆತನಿಂದ ಪತ್ರವು ಬರೆಯಲ್ಪಟ್ಟಿತು, ಆದ್ದರಿಂದ ತಂದೆಯ ಆಜ್ಞೆ ಉಲ್ಲಂಘನೆ ಆಗಲಿಲ್ಲ ಎಂಬ ಅರ್ಥ ಸರಿಯಾಗುತ್ತದೆ.

ಏಕೋನಾ ವಿಂಶತಿಃ ಸ್ತ್ರೀಣಾಂ
ಸ್ನಾನಾರ್ಥಂ ಸರಯೂಂ ಗತಾ ।
ವಿಂಶತಿಃ ಪುನರಾಯಾತಾ
ಏಕೋ ವ್ಯಾಘ್ರೇಣ ಭಕ್ಷಿತಃ ॥

ಇಪ್ಪತ್ತು ಮಂದಿಯ ಸ್ತ್ರೀಯರ ಗುಂಪೊಂದು ಸ್ನಾನಕ್ಕಾಗಿ ಸರಯೂ ನದಿಗೆ ಹೋಯಿತು. ಇಪ್ಪತ್ತರ ಗುಂಪು ಮರಳಿ ಬಂದಿತು. ಒಬ್ಬ ಹುಲಿಗೆ ಬಲಿಯಾದ. ಇದು ಮೇಲೆ ಮೇಲೆ ಕಂಡು ಬರುವ ಅರ್ಥ. ಹೋಗಿದ್ದ 20 ಜನರೂ ಮರಳಿ ಬಂದಲ್ಲಿ ಹುಲಿಗೆ ಬಲಿಯಾದವರು ಯಾರೆಂಬ ಸಮಸ್ಯೆ ಇದಿರಾಗುತ್ತದೆ. ಅದಕ್ಕಾಗಿ 'ಏಕೋನಾ' ಎಂಬುದನ್ನು 'ವಿಂಶತಿಃ' ಎಂಬುದಕ್ಕೆ ವಿಶೇಷಣ ಮಾಡಿದರೆ ಈ ಸಮಸ್ಯೆ. ಹಾಗೆ ಮಾಡದೆ 'ಏಕೋ' 'ನಾ' ಎಂಬುದಾಗಿ ಪ್ರತ್ಯೇಕಿಸಿ ಅದಕ್ಕೆ 'ಒಬ್ಬ ಪುರುಷ' ಎಂದು ಅರ್ಥ ಮಾಡಬೇಕು. ಇಪ್ಪತ್ತು ಸ್ತ್ರೀಯರ ಗುಂಪು ಮತ್ತೂ ಒಬ್ಬ ಪುರುಷ ಸ್ನಾನಕ್ಕೆ ಹೋಗಿದ್ದರು. 20ರ ಗುಂಪು ಮರಳಿ ಬಂದಿತು. ಆ ಒಬ್ಬ ಪುರುಷ ಹುಲಿಗೆ ಆಹಾರವಾದನು. ಹೀಗೆ ಅರ್ಥ ಮಾಡಬೇಕು.

ಉಚ್ಛಿಷ್ಟಂ ಶಿವನಿರ್ಮಾಲ್ಯಂ
ವಮನಂ ಶವಕರ್ಪಟಿಮ್ ।
ಕಾಕವಿಷ್ಠಾ ಸಮುತ್ಪನ್ನಃ
ಪಂಚೈತೇಽತಿ ಪವಿತ್ರಕಾಃ ॥

ಇದರ ಮೇಲ್ನೋಟದ ಅರ್ಥ ಹೀಗೆ — 'ಎಂಜಲು, ಶಿವನ ಮೇಲೆ ಏರಿಸಿದ್ದು, ವಾಂತಿ ಮಾಡಿದ್ದು, ಹೆಣದ ಬಟ್ಟೆ, ಕಾಗೆಯ ಮಲದಿಂದ ಹುಟ್ಟಿದ್ದು – ಇವು ಐದು ಅತ್ಯಂತ ಪವಿತ್ರವಾದವುಗಳು'. ಹೀಗೆ ಅರ್ಥೈಸುವುದಾದರೆ ಇದು ಹುಚ್ಚನ ಮಾತೆಂದು ಹೇಳುವುದರಲ್ಲಿ ಸಂದೇಹವಿಲ್ಲ. ಆದರೆ ಇದರ ನಿಜವಾದ ಅರ್ಥ ಹೀಗೆ – ಕರು ಕುಡಿದ ನಂತರ ಹಿಂಡಿದ ಆಕಳ ಹಾಲು, ಶಿವನ ತಲೆ ಮೇಲಿರುವ ಗಂಗೆ, ಜೇನುತುಪ್ಪ, ರೇಷ್ಮೆ ಬಟ್ಟೆ, ಅಶ್ವತ್ಥಗಿಡ (ಅರಳಿಗಿಡ) – ಇವು ಐದು ಅತ್ಯಂತ ಪವಿತ್ರವಾದವುಗಳು.

ಇಂತಹ ಪದ್ಯಗಳು ಸಂಸ್ಕೃತದಲ್ಲಿ ಸಾಕಷ್ಟಿವೆ. ಇದು ಕುತೂಹಲಿಗಳಿಗೆ ಆ ದಿಸೆಯಲ್ಲಿ ಪ್ರಚೋದನೆ ನೀಡೀತೆಂದು ಭಾವಿಸುತ್ತೇನೆ. ★

# ಹೊಸ ಊಂಜಲ್ ಸೇವೆ

ಶ್ರೀ ವೆಂಕಟೇಶ್ವರಸ್ವಾಮಿಯನ್ನು ಭಕ್ತರು ಅರ್ಚಿಸಲು ಅನುವಾಗುವಂತೆ ಪರಂಪರೆಯಿಂದ ನಡೆಯುತ್ತಿರುವ ಊಂಜಲ್ ಸೇವೆಯೊಂದಿಗೆ ಅಪೂರ್ವವಾದ ಹೊಸ ಊಂಜಲ್‌ಸೇವೆಯನ್ನು ಆರಂಭಿಸಲಾಗಿದೆ.

ಹೆಚ್ಚು ಮಂದಿ ಭಕ್ತರು ಸ್ವಾಮಿಯ ಆರಾಧನೆ ಮಾಡಲು ಅನುಕೂಲವಾಗುವಂತೆ ಆಲಯದ ಹೊರಗಣ ಖನಿಜ ಮಂಟಪದಲ್ಲಿ ಈ ಹೊಸಸೇವೆಯನ್ನು ಏರ್ಪಾಡು ಮಾಡಲಾಗುತ್ತದೆ. ಈ ಸೇವೆಗಾಗಿ ರೂ 3000/– ಶುಲ್ಕ ನೀಡಬೇಕಾಗುತ್ತದೆ.

ಹೊಸ ಊಂಜಲ್‌ಸೇವೆ ಮಾಡಿಸಲು ಗೃಹಸ್ಥರು ಮುಂದೆ ಬಾರದಿದ್ದ ದಿನಗಳಲ್ಲಿ ಊಂಜಲ್‌ಸೇವೆ ಮುಕುರಮಂಟಪದಲ್ಲಿ ನಡೆಯುತ್ತದೆ. ಈ ಸೇವೆಗೆ ಭಕ್ತರು ರೂ 1500/ ಸಲ್ಲಿಸಬೇಕಾಗುತ್ತದೆ.



# ಗೃಹಲಕ್ಷ್ಮಿ



## ಲಕ್ಷ್ಮೀ ಹಾಡು

ಗೃಹಿಣಿಯು ದಿನಚರಿಗೆ ದಾರಿದೀಪವಾಗುವಂತಹ ಅನೇಕ ಸಂಪ್ರದಾಯದ ಹಾಡುಗಳನ್ನು ಹೆಂಗಳೆಯರು ಹಾಡುವುದನ್ನು ಕಾಣುತ್ತೇವೆ. "ಲಕ್ಷ್ಮೀನಾಕ್ಯ"ಎಂಬ ಹಾಡಿನಲ್ಲಿ ಲಕ್ಷ್ಮೀದೇವಿ ತನ್ನ ಭಕ್ತನಿಗೆ ಅಷ್ಟೈಶ್ವರ್ಯವನ್ನಿತ್ತು, ತಾನು ಎಂತಹ ಮನೆಯಲ್ಲಿ ನೆಲೆಸುತ್ತೇನೆ ಎನ್ನುವುದನ್ನು ಅರುಹುತ್ತಾಳೆ.

ಬಡಬ್ರಾಹ್ಮಣನೊಬ್ಬ ತನ್ನ ಪತ್ನಿಯೊಡನೆ ಆಚಾರವಂತನಾಗಿ ಬಾಳುತ್ತಿದ್ದ. ಒಂದುದಿನ ಹಣ್ಣು ಹಂಪಲನ್ನು ತರಲು ಆತ ತೋಟಕ್ಕೆ ಹೋದ. ಲಕ್ಷ್ಮೀದೇವಿ ಆತನನ್ನು ಪರೀಕ್ಷಿಸುವ ಸಲುವಾಗಿ ಮುಪ್ಪಿನ ಮುತ್ತೈದೆಯಾಗಿ ಅವನೆದುರಿಗೆ ಕಾಣಿಸಿಕೊಳ್ಳುತ್ತಾಳೆ. ಬ್ರಾಹ್ಮಣ ಆಕೆಯ ಪಾದಗಳಿಗೆ ವಂದಿಸಿ, ನಿಮ್ಮ ಇರವೆಲ್ಲಿ ಎಂದು ಕೇಳಲು, ಆಕೆ ತಾನು ದಿಕ್ಕಿಲ್ಲದವಳು ಎನ್ನುತ್ತಾಳೆ.

"ಉತ್ತಮರಾಗಿಹ ಮುತ್ತವ್ವರ್ ಕೇಳಿರಿ
ವಿಪ್ರರು ನೀವು ಇರುವೆಲ್ಲಿ ಎಂದರೆ
ವಿಪ್ರ ಕೇಳೆನಗೆ ಪಿತರಿಲ್ಲ|
ಮತಿವಂತ ಕೇಳಯ್ಯ ಪತಿಸುತಾದಿಗಳಿಲ್ಲ
ದ್ವಿಜಬೃಂದದಿಂದೊಪ್ಪಿಹ ತನಯರಿಲ್ಲ
ಮತಿಯ ನೀ ನೋಡು ಮನದಲ್ಲಿ |"

ಮುದುಕಿಯ ಈ ಮಾತನ್ನು ಕೇಳಿ ಬ್ರಾಹ್ಮಣನ ಮನಸ್ಸು ಕರಗಿ ನೀರಾಗುತ್ತದೆ. ತಾನು ಕಿತ್ತಿದ್ದ ನೆಲ್ಲಿಕಾಯಿಯನ್ನು ಹೆಗಲಿಗೇರಿಸಿಕೊಂಡು ಮುದುಕಿಯನ್ನೂ ಕರೆದುಕೊಂಡು ಮನೆಕಡೆ ನಡೆಯುತ್ತಾನೆ.

ತನಗೇ ತಿನ್ನಲು ಗತಿಯಿಲ್ಲದಿದ್ದರೂ ಹಿಂದು ಮುಂದು ಯೋಚಿಸದೆ ಗತಿವಿಹೀನಳಾದ ಮುದುಕಿಯನ್ನು ಮನೆಗೆ ಕರೆದೊಯ್ಯುವ ಬ್ರಾಹ್ಮಣನ ಹೃದಯ ವೈಶಾಲ್ಯಕ್ಕೆ ಲಕ್ಷ್ಮಿ ಮಾರುಹೋಗುತ್ತಾಳೆ.

ಮನೆಯ ಹತ್ತಿರ ಬಂದಾಗ, ಪತಿ ಬರುತ್ತಿರುವುದನ್ನು ಕಂಡು ಆತನ ಹೆಂಡತಿ ಅವನನ್ನು ಎದುರುಗೊಂಡು, ನೆಲ್ಲಿಕಾಯಿಯನ್ನು ಕೆಳಗಿಳಿಸಿಕೊಂಡು, ಮುದುಕಿಯನ್ನು ಆದರದಿಂದ ಮನೆಗೆ ಕರೆತರುತ್ತಾಳೆ.

ಪತಿಯ ಬರವನು ಕಂಡು ಮತಿವಂತೆ
ತಾನೆದ್ದು
ಅತಿ ಭಕ್ತಿಯಿಂದ ಮಡಿಲಹಣ್ಣನೆ ಅಂತು
ಮಹಲಕ್ಷ್ಮಿಯನೆ ಪಿಡಿದೆತ್ತಿ
ಪೃಥುವೀಶಗೆ ಕರವ ಮುಗಿದಾಳು |

ಅವರ ಕಾಲ್ತೊಳೆದು, ಕುಳಿತುಕೊಳ್ಳಲು ಮಣೆಯನ್ನಿತ್ತು ಅಡಿಗೆ ಮಾಡತೊಡಗಿದಳು.

ಆದರದಿ ಮಣೆಕೊಟ್ಟು ಪ್ರೀತಿಯಲಿ
ಕಾಲ್ತೊಳೆದು
ಅಜ್ಜ ಪನ್ನೀರ ತಳಿಯ ತಿಂತಿರಲಾಕೆ
ಜಜ್ಜರನೆ ಅಡಿಗೆಗೆ ತೊಡಗಿದಳು |

ಆಗ ಬ್ರಾಹ್ಮಣಿ ಅಡಿಗೆಮಾಡುತ್ತಿದ್ದಾಗ ಬ್ರಾಹ್ಮಣ ಮುದುಕಿಯ ಜೊತೆ ಸುಖ ದುಃಖಗಳನ್ನು ಮಾತಾಡುತ್ತ ಕುಳಿತುಕೊಳ್ಳುತ್ತಾನೆ. ಹಿಂದಿನ ಜನ್ಮದಲ್ಲಿ ನಾನು ಯಾರಿಗೂ ಅನ್ನವನ್ನು ನೀಡದೆ ಉಂಡೆನೇನೋ ! ಈ ಜನ್ಮದಲ್ಲಿ ಹೊಟ್ಟೆ ತುಂಬ ಊಟಮಾಡಲು ಗತಿಯಿಲ್ಲದೆ ಅಡವಿಯಲ್ಲಿರುವ ಹಣ್ಣುಹಂಪಲನ್ನು ತಿನ್ನುತ್ತ ಕಾಲ ಕಳೆಯುತ್ತಿದ್ದೇನೆ ಎಂದು ಪೇಚಾಡಿ ಕೊಳ್ಳುತ್ತಾನೆ.



ವಸ್ತ್ರವನ್ನು ಯಾರಿಗೂ ಕೊಡದೆ ನಾನೇ ಉಟ್ಟುಕೊಂಡೆನೋ ಏನೋ, ನಾನು ಅಡವಿಯ ಸೊಪ್ಪುಸೊದೆಗಳಿಂದ ಮೈಮುಚ್ಚಿಕೊಳ್ಳುವ ಸ್ಥಿತಿ ಉಂಟಾಗಿದೆ. ನನ್ನ ಮಡದಿ ನಾರುಸೀರೆ ಉಡುವಂತಾಗಿದೆ ಎಂದು ಗೋಳಾಡುತ್ತಾನೆ.

ಆತನ ದುಃಖವನ್ನು ನೋಡಿ ಮುದುಕಿಯ ರೂಪದ ಮಹಾಲಕ್ಷ್ಮಿ ಅವನಿಗೆ ತನ್ನ ನಿಜರೂಪವನ್ನು ತೋರುತ್ತಾಳೆ. ಅವನ ಮನೆಯಲ್ಲಿ ಶಾಶ್ವತವಾಗಿ ನೆಲೆಸುವುದಾಗಿ ವಚನ ನೀಡುತ್ತಾಳೆ.

ಕೇಳಿದೆ ವಿಪ್ರಯ್ಯ ಮನೆಯ ದುಃಖವ
ಈವೆನು ನಿನಗೆ ಸಿರಿಸಾಲು ಸಂಪತ್ತಾ
ಮೇಲೆ ಅಂಬಾರಿ ನೆಲೆಸಿರ್ಪೆ |
ಮನೆ ಬಾಗಿಲಿನಲಿರ್ಪೆ ಮನೆಯ
ಹೊಸ್ತಿಲಲಿರ್ಪೆ
ಈಶಾನ್ಯಮೂಲೆ ನಡುಮನೆ ದೇವರ
ಜಗುಲಿ
ಒಲೆಯ ಹಿಂದಿರ್ಪೆ ಬಡವಿಪ್ರ |

ಗರುಡವಾಹನನಾದ ಶ್ರೀಕೃಷ್ಣನ ಮಡದಿಯಾದ ಮಹಾಲಕ್ಷ್ಮಿಯೇ ನಾನು. ನಿನ್ನ ಭಕ್ತಿಗೆ ಒಲಿದು ನಿನ್ನ ಮನೆಯನ್ನು ಬೆಳಗಬಂದಿದ್ದೇನೆ ಎನ್ನುತ್ತಾಳೆ ಶ್ರೀಲಕ್ಷ್ಮಿ.

( 23ನೇ ಪುಟ ನೋಡಿ )

ಶ್ರೀಮತಿ ಬಿ.ಎಸ್. ಸರೋಜ, ಎಂ.ಎ

# ಕಿಶೋರ ಜಗತ್



ಆಗ ತಾನೆ ಸೂರ್ಯೋದಯವಾಗಿತ್ತು. ಪಕ್ಷಿಗಳೆಲ್ಲವೂ ಚಿಲಿಪಿಲಿನೆ ಶಬ್ದ ಮಾಡುತ್ತಾ ಅಮಿತೋತ್ಸಾಹದಿಂದ, ತಮ್ಮ ಗೂಡುಗಳಿಂದ ಹೊರಬಂದು, ಆಹಾರಾರ್ಥವಾಗಿ ಹೊರಹೊರಟಿದ್ದವು. ಎಳೆ ಸೂರ್ಯನ ಕಿರಣದ ಹಿತಕರ ಶಾಖದ ಸವಿಯನ್ನನುಭವಿಸಲು ಮತ್ಸ್ಯ ಸಮೂಹಗಳೆಲ್ಲವೂ, ಹರಿಯುವ ನದಿಯ ನೀರಿನ ಮಟ್ಟದಲ್ಲೇ ಕ್ರೀಡಾಸಕ್ತವಾಗಿದ್ದವು. ಸದಾಕಾಲವೂ ಹಚ್ಚ ಹಸುರಾಗಿಯೇ ಉಳಿಯುವ, ಮುಪ್ಪಿಲ್ಲದ, ಅಸಂಖ್ಯ ವನವೃಕ್ಷಗಳು, ತಮ್ಮ ಎಲೆಗಳ ಚಲನವಲನಗಳಿಂದುತ್ಪತ್ತಿಯಾಗುವ ತಂಗಾಳಿಯು, ಮೃಗಪಕ್ಷಿಗಳನ್ನು ತಣಿಸುವುದನ್ನು ಕಂಡು, ಅಮಿತಾನಂದದಿಂದ ನರ್ತಿಸುತ್ತಿರುವುವೋ ಎಂಬಂತಿದ್ದವು. ಎತ್ತನೋಡಿದರೂ ಗಗನ ಚುಂಬಿ ಪರ್ವತಗಳ ಸಾಲು. ಕಾಣರಿಯದ ಆಸರೆಯಿಂದ, ಕುಣಿಕುಣಿದುಬರುವ ಸಣ್ಣ ಝರಿಗಳ ಸಮೂಹ – ವನದೇವತೆಯ ಸೌಂದರ್ಯವನ್ನು ಇಮ್ಮಡಿಗೊಳಿಸಿದ್ದವು.

ಸ್ವಲ್ಪ ದೂರದಲ್ಲಿಯೇ ಪರ್ವತವೊಂದರ ಮಡಿಲಲ್ಲಿ, ಋಷಿಗಳ ತಪೋವನವಿದ್ದಿತು. ಮೃಗಪಕ್ಷಿಗಳು ತಮ್ಮ ಸಹಜಭಯವನ್ನು ತೊರೆದು ನಿಶ್ಚಿಂತೆಯಿಂದ ಚಲಿಸುತ್ತಿದ್ದುದೇ ಇದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದ್ದಿತು. ಋಷಿಮುನಿಗಳು, ಸಾಧುಸಂತರನೇಕರು ಅಲ್ಲಿ ತಮ್ಮ ಪರ್ಣಶಾಲೆಗಳನ್ನು ನಿರ್ಮಿಸಿಕೊಂಡಿದ್ದರು. ಕೆಲವರು ಯಜ್ಞಯಾಗಾದಿಗಳಿಗೆ ಸಮಿತ್ತುಗಳನ್ನು ಆರಿಸುತ್ತಿದ್ದರು, ಕೆಲವರು ಗೆಡ್ಡೆಗೆಣಸು, ಹಣ್ಣು–ಹಂಪಲು, ಪುಷ್ಪ, ದರ್ಭಾದಿಗಳನ್ನು ಸಂಗ್ರಹಿಸುವುದರಲ್ಲಿ ನಿರತರಾಗಿದ್ದರು. ನದಿಯ ನೀರಿನಲ್ಲಿ ಅಲ್ಲೊಬ್ಬ, ಇಲ್ಲೊಬ್ಬರು ಮಹರ್ಷಿಗಳು, ನಡುವಿನ ಮಟ್ಟಕ್ಕೆ ಇಳಿದು, ಸೂರ್ಯನಿಗೆ ಅರ್ಘ್ಯ ಕೊಡುವುದಕ್ಕಾಗಿ, ಸ್ವರಬದ್ಧ ಮಂತ್ರಗಳನ್ನು ಪಠಿಸುತ್ತಾ ತಮ್ಮ ಅಂಜಲಿಯಲ್ಲಿ ನೀರು ತೆಗೆದುಕೊಂಡಾಗ, ಅದರಲ್ಲಿ ಬಿದ್ದ ಸೂರ್ಯನ ಪ್ರತಿಬಿಂಬದಿಂದ ಹೊರಟ ಬೆಳಕು ಅವರ ಮುಖಾರವಿಂದಗಳನ್ನು ಬೆಳಗಿದ್ದವು. ಮಹರ್ಷಿಗಳು ಒಟ್ಟಾಗಿ ಉಚ್ಚರಿಸುತ್ತಿದ್ದ ವೇದೋಪನಿಷತ್ತುಗಳ ಮಂತ್ರಪುಷ್ಪಗಳನ್ನು, ವಾಯುದೇವನು ದಶದಿಕ್ಕುಗಳಿಗೂ ಕೊಂಡೊಯ್ಯುವ ಮಹತ್ಕಾರ್ಯದಲ್ಲಿ ನಿರತರಾಗಿದ್ದನು. ವನದೇವತೆ ಅಂದು ಅತ್ಯಂತ ತೃಪ್ತಳಾಗಿರುವಂತೆ ಕಾಣುತ್ತಿದ್ದಳು.

ಆದರೆ, ಬೆಳಕಿನ ಹಿಂದೆ ನೆರಳಿರಲೇಬೇಕಾದುದು ಜಗತ್ತಿನ ನಿಯಮ. ಚಂದ್ರನಕ್ಷತ್ರಾದಿಗಳಿಂದಲಂಕರಿಸಲ್ಪಟ್ಟ ನಿರ್ಮಲಾಕಾಶದಲ್ಲಿ ಧೂಮಕೇತು ಪ್ರವೇಶಿಸಿದಂತೆ, ಭಯಶಾಪವಿವರ್ಜಿತವಾದ, ಸುಖಶಾಂತಿಯ ಸಾಕಾರವಾದ ಆ ವನದ, ಮೌನವನ್ನು ಸೀಳಿ, ಗೋಮಾತೆಯೊಂದರ ಭಯೋತ್ಪಾದಿತ ಚೀತ್ಕಾರ ಹೊರಹೊಮ್ಮಿತು.

## ಸಹೃದಯ ಸಾಧು

ಕೃತಘ್ನ ಕಟುಕನೊಬ್ಬ ನದೀದಡದಲ್ಲಿ, ಬಡಹಸುವೊಂದನ್ನು ಕೊಲ್ಲಲೋಸುಗ, ಅದನ್ನು ಓಡಿಸುತ್ತಾ, ಹೊಡೆದು ಬಡಿಯುತ್ತಾ, ತಳ್ಳಿನೂಕುತ್ತಾ ಅಟ್ಟಿಸಿಕೊಂಡು ಬರುತ್ತಿದ್ದನು. ಅದಾದರೋ ನಡೆಯಲಾರದ ಮುದಿಹಸು ಪಾಪ! ಏಳುತ್ತಾ ಬೀಳುತ್ತಾ, ಏದುಸಿರುಬಿಡುತ್ತಾ ಓಡುತ್ತಿದ್ದಿತು. ಒಂದಾನೊಂದು ಕಾಲದಲ್ಲಿ ಅದೇ ಹಸು ಗಟ್ಟಿಮುಟ್ಟಾಗಿ, ದಷ್ಟಪುಷ್ಟವಾಗಿದ್ದಾಗ ಅದರ ಯಜಮಾನನು ಅತ್ಯಂತ ವಿಶ್ವಾಸದಿಂದ ಕಾಪಾಡಿಕೊಂಡಿದ್ದನು. ಹಬ್ಬ – ಹರಿದಿನಗಳಲ್ಲಿ ಪೂಜಿಸುತ್ತಲೂ ಇದ್ದನು. ಆದರೆ ಈಗ, ಅದೇ ಹಸು ಮುಪ್ಪಿನ ಹಿಡಿತಕ್ಕೊಳಗಾಗಿ ನಿಂತು ಕೂರುವುದಕ್ಕಿರಲಿ, ತಿನ್ನಲೂ ಸಹ ಶಕ್ತಿಯಿಲ್ಲದ ಸ್ಥಿತಿಯಲ್ಲಿರುವಾಗ, ಅದನ್ನು ಕಟುಕನೊಬ್ಬನಿಗೆ ಮಾರಿಬಿಟ್ಟಿರುವನು. ಅಂದು ಗಡಿಗೆಗಡಿಗೆಗಳಲ್ಲಿ ನೊರೆ ಹಾಲನ್ನು, ಕರುವಿಗೂ ಒಂದು ತೊಟ್ಟು ಬಿಡದೆ ಕರೆದುಕೊಂಡು, ಇಂದು ಕಟುಕನೊಬ್ಬನಿಗೆ ಉಪಯೋಗವಿಲ್ಲವೆಂದು ಮಾರಿರುವ ಆ ದುಷ್ಟ ಕೃತಘ್ನನನ್ನು ಮನಸಾರೆ ಶಪಿಸಲೂ ಕೂಡಾ ಬಾರದ, ಅರಿಯದ ಮುಗ್ಧ ಹಸು, ಈಗ ಈ ಕಡುಕನ ಆರ್ಭಟಕ್ಕೆ ಹೆದರಿ, ಬೆದರುಗಣ್ಣು ಬಿಡುತ್ತಿದೆ ಪಾಪ!

ಆ ಕಟುಕನೋ, ನಿಂತರೆ ನಾಲ್ಕು ಬಾರಿಸಿ ಅದನ್ನು ಓಡಿಸಿಕೊಂಡು, ಬರುತ್ತಿದ್ದಾನೆ. ಪಾಪ! ಆ ಮುಗ್ಧಗೋವಿನ ಅಂತಃಕರಣವನ್ನು ಆ "ಅಂತರ್ಯಾಮಿಯೇ" ಬಲ್ಲವನಾಗಿದ್ದನು.

ಕೊನೆಗೂ ನದಿಯು ಸಿಕ್ಕೇ ಬಿಟ್ಟಿತು. ಕಟುಕನು ಕರ್ಕಶವಾಗಿ ನಗುತ್ತಾ ಹಸುವನ್ನು ಒಂದು ಬಂಡೆ ಕಲ್ಲಿಗೆ ಕಟ್ಟಿ, ತಾನು ಆಯಾಸ ಪರಿಹರಿಸಿಕೊಳ್ಳಲು ನದಿನೀರಿಗಿಳಿದನು. ಓಡೋಡಿ ಎಡೆಬಿಡದೆ ಬಂದಿದ್ದರಿಂದ ಹಸುವಿಗೂ ಬಹಳ ದಣಿವಾಗಿ, ಬಾಯೊಣಗಿ, ನೊರೆ ನೊರೆಯಾಗಿ ಜೊಲ್ಲು ಹೊರಬರುತ್ತಿತ್ತು. "ನದಿಯಲ್ಲಿ ನೀರಿಗೇನು ಕೊರತೆ? ಆದರೆ ತನಗೆ ಕುಡಿಯುವುದಕ್ಕಿಲ್ಲವಲ್ಲಾ!" ಮನಸ್ಸಿನಲ್ಲೇ ನೊಂದುಕೊಂಡಿತು ಹಸು. ಆ ಕಟುಕನಾದರೋ ಯಥೇಚ್ಛವಾಗಿ ನೀರು ಕುಡಿದು, ಕೈ ಕಾಲು ತೊಳೆಯುವುದರಲ್ಲಿ ಮುಗ್ನನಾಗಿದ್ದಾನೆ.

**ಶ್ರೀ ಸುರೇಶ್ ಹೆಮ್ಮಿಗೆ**

ಈ ಹಸುವಿಗೆ ದಾಹವನ್ನು ತಡೆಯಲಾಗಲಿಲ್ಲ. ಶಕ್ತಿಮೀರಿ ಒಂದು ಸಲ ಎಳೆಯಿತು. ಆದರೆ ಹಗ್ಗ ಬಿಗಿಯಾಗಿಯೇ ಇತ್ತು. ಮತ್ತೊಂದು ಸಲ ಶಕ್ತಿಯನ್ನು ಸ್ಮರಿಸಿ ಎಳೆಯಿತು. ಹಗ್ಗ ಒಂದೇ ಬಿಟ್ಟಿತು. ನೋಡಿತು ಒಮ್ಮೆ ಆ ಹಸು. ಕಟುಕನಿನ್ನೂ ನೀರಿನಲ್ಲಿಯೇ ಇದ್ದ. ತಕ್ಷಣವೇ ಓಟ ಕಿತ್ತಿತ್ತು ಆ ಹಸು. ಬಾಯಾರಿಕೆ ಹಾಗಿರಲಿ ಪ್ರಾಣ ಉಳಿಸಿಕೊಳ್ಳೋಣವೆಂದು ಅದು ಯೋಚಿಸಿತ್ತು. ಪೊದೆಬಳ್ಳಿ ಗಿಡಮರಗಳನ್ನೂ ಲೆಕ್ಕಿಸದೆ ಓಡುತ್ತಿದೆ ಹಸು.

ಕಟುಕನಾದರೋ, ನಿಧಾನವಾಗಿ ಎಲ್ಲವನ್ನೂ ಮುಗಿಸಿ, ನದಿಯಿಂದ ಮೇಲೆ ಬಂದು ನೋಡುತ್ತಾನೆ ! ಹಸು ಅಲ್ಲಿರಲಿಲ್ಲ. ಅವನು ಸುತ್ತಲೂ ನೋಡಿದಾಗ, ದೂರದಲ್ಲಿ; ಬಹಳ ದೂರದಲ್ಲಿ ಆ ಹಸು ಓಡುತ್ತಿದ್ದುದು ಗೋಚರಿಸಿತು. ತಕ್ಷಣವೇ ತನ್ನ ಹರಿತವಾದ ಖಡ್ಗದೊಂದಿಗೆ ಹಿಂಬಾಲಿಸಿ ಓಡಿದ ಅವನು.

ಇತ್ತ ಆ ಹಸು ಓಡುತ್ತಾ, ಬೀಳುತ್ತಾ, ಸುಸ್ತಾಗಿ, ಕೊನೆಗೆ, ಋಷಿಗಳ ಆವಾಸಸ್ಥಾನವಾದ, ಬೆಟ್ಟದ ಮಡಿಲಿನ ತಪೋವನದೊಳ ಹೊಕ್ಕಿತು. ಅಲ್ಲಿ ಸಾಧುವೊಬ್ಬರ ಪರ್ಣಕುಟೀರದ ತೋಟದೊಳಗೆ ಆಶ್ರಯ ಪಡೆಯಿತು. ಕುಟೀರದ ಮುಂದೆ, ದೊಡ್ಡ ವೃಕ್ಷವೊಂದರಡಿಯಲ್ಲಿ, ಶಿಷ್ಯರೊಡನೆ ಕಾಲಕ್ಷೇಪ ಮಾಡುತ್ತಿದ್ದ ಮಹರ್ಷಿಗಳು ಹಸುವು ತಮ್ಮ ಕುಟೀರಕ್ಕೆ ಹೋದದ್ದನ್ನು ಗಮನಿಸಿದರು.

ಆ ಬಡಹಸುವಿನ ದುರದೃಷ್ಟವೋ ಎಂಬಂತೆ ಆ ಚಾಣಾಕ್ಷ ಕಟುಕ ಅಲ್ಲಿ ಇಲ್ಲಿ ನೋಡುತ್ತಾ ಆ ಋಷ್ಯಾಶ್ರಮದ ಸಮೀಪವೇ ಬಂದು ಬಿಟ್ಟನು. ಶಿಷ್ಯರಿಗೆ ಉಪದೇಶಿಸುವುದರಲ್ಲೇ ಮಗ್ನರಾಗಿದ್ದರೂ ಆ ತೇಜಸ್ವಿ ಮಹರ್ಷಿಗಳಿಗೆ ನಡೆದ ವೃತ್ತಾಂತವೆಲ್ಲವೂ ಜ್ಞಾನದೃಷ್ಟಿಯಿಂದ ತಿಳಿದು ಹೋಗಿತ್ತು.

ಶಿಷ್ಯಸಮೂಹವೆಲ್ಲವೂ ಏಕಕಂಠದಿಂದ ವೇದೋಪನಿಷತ್ತುಗಳ ಮಂತ್ರಗಳನ್ನು ಕ್ರಮ – ಸ್ವರಬದ್ಧವಾಗಿ ಪಾರಾಯಣ ಮಾಡುತ್ತಿದ್ದುದು ಆ ಮೊಂಡುಮತಿಯ ಕಟುಕನನ್ನೂ ತುಸು ಹೊತ್ತು ಸ್ವಾತ್ಮ ಚಿಂತನೆ ಮಾಡುವಂತೆ ಪ್ರೇರೇಪಿಸಿತ್ತು.

ಕೊನೆಗೂ ಆ ಕಟುಕ ಆ ಮಹರ್ಷಿಗಳನ್ನು ಸಮೀಪಿಸಿ "ಎಲೈ ತಪಸ್ವಿಯೇ! ಒಂದು ಹಸು ಈ ಕಡೆ ಎಲ್ಲಾದರೂ ಬಂದದ್ದನ್ನು ಕಂಡಿರಾ?'' ಎಂದು ಕೇಳಿದನು. ತಕ್ಷಣವೇ ಆ ಮಹರ್ಷಿಗಳು ಚಿಂತನಾಶೀಲರಾದರು. ಈಗ ನೋಡಿದನೆಂದು ನಿಜ ಹೇಳಿದರೆ, ಅನ್ಯಾಯವಾಗಿ ಆ ಮುಗ್ಧ ಮೂಕ ಪ್ರಾಣಿಯನ್ನು ಹೇಳಿ ಕೊಲ್ಲಿಸಿದಂತಾಗುತ್ತದೆ. ಇಲ್ಲವೆಂದು ಹೇಳಿದರೆ. ಅನೃತ ನುಡಿದಂತಾಗುತ್ತದೆ. ಏನು ಮಾಡುವುದು. ಸಾಧುಗಳು ತುಸು ಯೋಚಿಸಿ, ತಟ್ಟನೆ ಕಣ್ಣು ತೆರೆದು ನಗು ಮುಖದಿಂದ ಈ ಕೆಳಗಿನ ಮಾತುಗಳನ್ನು ಹೇಳಿದರು. "ಎಲೈ ಸಹೋದರನೇ, ನೋಡಿದುದಕ್ಕೆ ಹೇಳಲು ಬರುವುದಿಲ್ಲ; ಹೇಳುವುದು ನೋಡಿಯೇ ಇಲ್ಲವಲ್ಲಾ !'' ಎಂದರು. ಕಟುಕನಿಗೆ ಈ ಮಹದ್ವಾಣಿಯ ಗೂಢಾರ್ಥ ಏನಿರಬೇಕೆಂದು ಕುತೂಹಲವುಂಟಾಯಿತು. ಆ ಸಹೃದಯದ ಸಾಧುವನ್ನು ಮತ್ತೆ ಸಂಬೋಧಿಸಿ ವಿವರವಾಗಿ ತಿಳಿಸಬೇಕೆಂದು ಕೇಳಿದನು. ಆಗ ಆ ತಪಸ್ವಿ, ಆ ಕಟುಕನಿಂದ ಆ ಹಸುವನ್ನು ಕೊಲ್ಲುವುದಿಲ್ಲವೆಂದು ಪ್ರಮಾಣ ಮಾಡಿಸಿಕೊಂಡು ಈ ರೀತಿ ನುಡಿದರು.

" ನೋಡಯ್ಯಾ ಸಹೋದರನೆ; ಆ ಹಸುವನ್ನು ನೋಡಿದ್ದು ನನ್ನ ಕಣ್ಣು ಆದರೆ ಕಣ್ಣಿಗೆ ಮಾತನಾಡಲು ಬರುವುದೆ? ಮಾತನಾಡುವುದು ಬಾಯಿ. ಆದರೆ ನನ್ನ ಬಾಯಿ ಆ ಹಸುವನ್ನು ನೋಡಿಯೇ ಇಲ್ಲವಲ್ಲಾ ! ಆದ್ದರಿಂದಲೆ ನಾನು, ನಿಜ ಹೇಳಿದರೆ ಅನ್ಯಾಯವಾಗಿ ಹಸು ಸಾಯುತ್ತದೆ. ನೋಡಿಲ್ಲವೆಂದರೆ ಸುಳ್ಳಾಡಿದಂತಾಗುವುದಲ್ಲವೇ? ಆದ್ದರಿಂದಲೆ ನಾನು ಆ ರೀತಿ ನನಗೆ ಹೇಳಿದೆ '' ಎಂದರು.

ಮಹರ್ಷಿಗಳ ಈ ಮಹದ್ವಾಣಿಯು ಆಗಲೇ ಆ ಕಟುಕನ ಕಲ್ಲೆದೆಯನ್ನು ಕರಗಿಸಿತ್ತು. ಇದುವರೆಗೂ ತಾನು ಮಾಡಿದ ದುಷ್ಕೃತ್ಯಗಳಿಗೆ ತಿಲಾಂಜಲಿಬಿಟ್ಟು, ಪಶ್ಚಾತ್ತಾಪ ಹೊಂದಿದವನಾಗಿ ಆ ಕಟುಕ, ಅಂದಿನಿಂದ ಆ ಸಹೃದಯದ ಸಾಧುವಿನ ಸೇವಕ ವೃತ್ತಿಯನ್ನು ಹಿಡಿದು ಕೃತಾರ್ಥನಾದ.

(20ನೇ ಪುಟದಿಂದ)

ಶೇಷನಾ ಹಾಸಾಗಿ ಶ್ರೀದೇವಿ ತೋಳಾಗಿ
ಕ್ಷೀರಸಾಗರದಲ್ಲಿ ಶಯನವಾಗಿರುತಿರುವ
ಶ್ರೀರಾಮರಾಯರಿಗೆ ಸತಿ ತಾನು ।
ಗರುಡನಾ ಹೆಗಲೇರಿ ಮಡದೀರನೊಡಗೊಂಡು
ಸಡಗರದಿಂದ ಗಗನದಲಿ ಸಂಚರಿಪ
ಶ್ರೀಕೃಷ್ಣರಾಯರಿಗೆ ಸತಿ ತಾನು ।

ಬಡ ಬ್ರಾಹ್ಮಣನ ಮನೆ ಲಕ್ಷ್ಮಿಯ ಕೃಪಾ ಕಟಾಕ್ಷದಿಂದ ಅರಮನೆಯಾಗಿ ಪರಿವರ್ತನೆ ಹೊಂದಿತು. ಅರಮನೆಯ ತುಂಬ ಹೊನ್ನ ರಾಶಿಯನ್ನು ತುಂಬಿ, ಸುಖಿಯಾಗಿ ಬಾಳೆಂದು ಬ್ರಾಹ್ಮಣನನ್ನು ಹರಸಿದಳು.

ಅರಮನೆಯೊಳಗೆಲ್ಲ ಹೊಯ್ದಳು ಹೊನ್ನಿನರಾಶಿ
ಬಡವಿಪ್ರ ನೀನುಂಡು ಸುಖಿಯಾಗಿ ಬದುಕೆಂದು
ತಡೆಯದೇ ವರವ ಕೊಡುತಿದ್ದು ।

ಶುಕ್ರವಾರ, ಮಂಗಳವಾರದಂದು ಮನೆಯನ್ನು ಸಾರಿಸಿ, ರಂಗವಲ್ಲಿಯನ್ನಿಟ್ಟು, ಶ್ರೀಕೃಷ್ಣನನ್ನು ಭಜಿಸುವ ಭಕ್ತರ ಮನೆಯಲ್ಲಿ ತಾನು ಶಾಶ್ವತವಾಗಿ ನೆಲೆಸುವುದಾಗಿ ಅಭಯವಿತ್ತಳು.

ಶುಕ್ರವಾರದ್ದಿವ್ಸ ಹೊಸ್ತಿಲನೆ ಸಾರಿಸಿ
ಅಜ್ಜಮುತ್ತೀನ ರಂಗವಾಲಿಯನ ಇಕ್ಕಿ
ಮತ್ತೆ ಶ್ರೀರಾಮರಿಗೆ ಪುಷ್ಪತುಳಸೀಯರ್ಪಿಸುವ
ಭಕ್ತಾರ ಮನೆಯಲ್ಲಿ ನೆಲೆಸಿರ್ಪೆ ।
ಮಂಗಳವಾರದ್ದಿವ್ಸ ಅಂಗಳವ ಸಾರಿಸಿ
ಅಜ್ಜಮುತ್ತೀನ ರಂಗವಾಲಿಯನೆ ಇಕ್ಕಿ
ಮತ್ತೆ ಶ್ರೀಕೃಷ್ಣರಿಗೆ ಪುಷ್ಪತುಳಸೀ ನೇರಿಸುವ
ಭಕ್ತಾರ ಮನೆಯಲ್ಲಿ ನೆಲಸಿರ್ಪೆ ।

ಉಯ್ಯಾಲೆಯನ್ನು ಒಂದು ಕಡೆಯಿಂದ ನೂಕಿದರೆ ಮತ್ತೊಂದು ಕಡೆಗೆ ಹೋಗಿ, ಅಲ್ಲಿ ಕ್ಷಣವೂ ನಿಲ್ಲದೆ ಸರ್ರನೆ ಮತ್ತೆ ಈ ಬದಿಗೆ ಬಂದು, ಅದೇ ಕ್ರಮವನ್ನು ವೇಗವಾಗಿ ಮುಂದುವರಿಸುತ್ತದೆ. ಅಂತೆಯೇ ಸೋಮಾರಿಯಾಗಿ ನಿಲ್ಲದೆ, ಗೃಹಕೃತ್ಯಗಳನ್ನು ಸರಸರನೆಮಾಡುತ್ತ ಕರ್ತವ್ಯ ಶೀಲಳಾಗಿರುವ ಗೃಹಿಣಿಯ ಮನೆ ಮನಗಳಲ್ಲಿ ತಾನು ನೆಲೆಸುವುದಾಗಿ ದೇವಿ ಭರವಸೆ ನೀಡುತ್ತಾಳೆ.

ಕೈಯೆಂದು ನೋಡದೆ ಮೈಯೆಂದು ನೋಡದೆ
ಉಯ್ಯಾಲೆಯಂತೆ ಕೆಲಸವ ಮಾಡುವ
ಮೈಯ್ಯ ಮೇಲಿರ್ಪೆ ಬಡವಿಪ್ರ ।

ಅಣ್ಣನ ಮಗಳನ್ನೇ ಸೊಸೆಯಾಗಿ ತಂದುಕೊಂಡು, ಅಣ್ಣನ ಮಗಳೆಂದು ಪ್ರೀತಿ ವಿಶ್ವಾಸಗಳಿಂದ ಆವಳನ್ನು ನೋಡಿಕೊಳ್ಳುವ ಸಹೃದಯಿ ಹೆಂಗಸಿನ ಮನೆಯಲ್ಲಿ ತಾನು ನೆಲೆಸುವುದಾಗಿ ವಚನ ನೀಡುತ್ತಾಳೆ ಲಕ್ಷ್ಮಿ. ಸದ್ಗೃಹಿಣಿಯಾಗಿರದೆ, ಅಕ್ಕಪಕ್ಕದವರೊಡನೆ ಕದನವಾಡುತ್ತ, ಪರರ ಸುಖವನ್ನು ಕಂಡು ಕರುಬುವ ಹೀನರಮನೆಯಲ್ಲಿ ನಾನು ಕ್ಷಣಕಾಲವೂ ನಿಲ್ಲುವುದಿಲ್ಲ. ಅಂತಹವರು ಕಡು ಬಡವರಾಗಿ ತೊಂದರೆ ಪಡುತ್ತಾರೆ ಎನ್ನುತ್ತಾಳೆ ಲಕ್ಷ್ಮಿ.

ನೆರೆಮನೆಯವರ ಕಂಡು ಕರುಬು ತಿರ್ಪರ
ನೆರೆಮನೆಯವರ ಕೂಡೆ ಕದನವ ಮಾಡುವ
ಹಾದಿಯನೆ ಮುಟ್ಟೆನೆಲೆವಿಪ್ರ ।

ಮನೆಯ ಕಸವನ್ನು ಗುಡಿಸದೆ, ಮನೆಯನ್ನು ಶುಚಿಯಾಗಿಡದೆ, ಧೂಳುತುಂಬಿರುವ ಮನೆಯಲ್ಲಿ ನಾನು ಕ್ಷಣಕಾಲವೂ ನೆಲೆಸುವುದಿಲ್ಲ. ಕಸಮುಸುರೆ ಎಂಜಲುಮಯವಾದ ಮನೆಯಲ್ಲಿ ನನ್ನ ಸಾನ್ನಿಧ್ಯವಿರುವುದಿಲ್ಲ ಎನ್ನುತ್ತಾಳೆ ಲಕ್ಷ್ಮಿ.

ಆಕಡೇಲ್ ಕಡಿಕಸ ಈ ಕಡೇಲ್ ಕಡಿಮುಸುರೆ
ಆ ಕೈಯ ತಂದು ಹೆಗಲಲಿಂಬಾಗಿ ತೊಡೆವ
ಕಡಿಪಾಪಿಯನೆ ಮುಟ್ಟೆನೆಲೆವಿಪ್ರ ।
ಅಲ್ಲಲ್ಲಿಗೆ ಧೂಳು ಅಲ್ಲಲ್ಲಿಗೆ ಥಾಳ
ಅಲ್ಲಲ್ಲಿಗೆಂಜಲು ಅಶುದ್ಧವಿದ್ದಲ್ಲಿ
ನಿಲ್ಲೆ ಕಾಣಯ್ಯ ಬಡವಿಪ್ರ ।

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

### ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ಮ 1-00 | ಸಂ 6-00 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರವರೆಗೆ ಮಾತ್ರ.

### ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

### ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | „ | 40-00 |
| 3. | ಪುಳಿಯೋಗರೆ | „ | 50-00 |
| 4. | ಪೊಂಗಲು | „ | 55-00 |
| 5. | ಸಕ್ಕರೆಪೊಂಗಲ್ | „ | 65-00 |
| 6. | ಶಾಕರ ಭಾತ್ | „ | 85-00 |
| 7. | ಕೇಸರೀ ಭಾತ್ | „ | 90-00 |
| 8. | ಸೀರ | „ | 155-00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

ಏನೆಮುಂದಿಯೆಲ್ಲ ಒಗ್ಗಟ್ಟಿನಿಂದಿರದೆ, ಪ್ರತಿ ದಿನವೂ ಜಗಳವಾಡುವವರ ಮನೆಯಲ್ಲಿ ನಾನು ಇರುವದಿಲ್ಲ ಎಂದು ಲಕ್ಷ್ಮಿ ಸ್ಪಷ್ಟ ಪಡಿಸುತ್ತಾಳೆ.

ನಿತ್ಯಾಮನೆಯಲ್ಲಿ ಕುಸ್ತೀ ಕಲಹವು
ನುಚ್ಚು ನೂರಾಗಿ ಒಡೆದಿದ್ದ ಮನೆಯು ನಾ
ಮುಟ್ಟೆ ಕಾಣಯ್ಯ ಬಡವಿಪ್ರ !

ಅಣ್ಣನಮಗಳನ್ನು ಸೊಸೆಯಾಗಿ ತಂದು ಕೊಂಡು ಅವಳಿಗೆ ಕಿರುಕುಳವನ್ನು ಮಾಡಿ ಬಳಲಿಸುವ, ಮನೆಯ ಹಸುವನ್ನು ಅಕಾರಣವಾಗಿ ಹೊಡೆದು ಹಿಂಸಿಸುವ ಹೆಂಗಳೆಯ ಮನೆಯಲ್ಲಿ ನಾನು ನೆಲೆಸುವುದಿಲ್ಲ ಎನ್ನುತ್ತಾಳೆ ಲಕ್ಷ್ಮಿ.

ಅಣ್ಣನಾ ಮಗಳೆಂದು ಅಳಲಿಸಿ ಆಳುವಳ
ಬೆಣ್ಣೆಯ ಭುಗರಿಸದೆ ನೈವೇದ್ಯ ಕೆಡು
ವಂಥ
ಕನ್ಯೆನ ಮುಟ್ಟೆನೆಲೊ ವಿಪ್ರ ।
ಅತ್ತಿಗೇ ಮಗಳೆಂದು ಅಳಲಿಸಿ ಆಳುವಳ
ಹಟ್ಟೀಯ ದನವ ಬಯ್ಯುತಿರ್ಪಳ
ಮನೆಯ ನಾ ಮುಟ್ಟ ಕಾಣಯ್ಯ
ಬಡವಿಪ್ರ ।

ಹೀಗೆ ಗೃಹಿಣಿಯ ಧರ್ಮವಾವುದು ಎನ್ನುವುದನ್ನು ಲಕ್ಷ್ಮೀ ಸರಳಸುಲಭವಾಗಿ ಹೇಳಿ ಕೊಡುತ್ತಾಳೆ. ಮನೆಯನ್ನು ಒಪ್ಪವಾಗಿಟ್ಟು ಕೊಂಡು, ಗೃಹಕೃತ್ಯವನ್ನು ಗಮನಿಸಿ, ಮನೆಯವರು, ನೆರೆಯವರೊಂದಿಗೆ ಸ್ನೇಹದಿಂದಿರುತ್ತ ದೇವರಸೇವೆ, ಪತಿಸೇವೆ ಮಾಡುವ ಗೃಹಿಣಿಯ ಮನೆ ಮನದಲ್ಲಿ ನಾನು ಸದಾ ನೆಲೆಯಾಗಿರುತ್ತೇನೆ ಎಂದು ಹೇಳಿ ಗೃಹಿಣಿಯ ಕರ್ತವ್ಯವನ್ನರುಹುತ್ತಾಳೆ. ಗೃಹಿಣಿಯ ಬಾಳು ಬೆಳಗಲು ಕೈದೀವಿಗೆಯನ್ನು ತೋರಿಸುತ್ತಾಳೆ, 'ಲಕ್ಷ್ಮೀವಾಕ್ಯ' ಎಂಬ ಸಂಪ್ರದಾಯದ ಹಾಡಿನಲ್ಲಿ.

ಇಲ್ಲಿ ಗಮನಿಸ ಬೇಕಾಗಿರುವುದು ಶುಚಿತ್ವ ಕರ್ತವ್ಯಶೀಲತೆ, ಭಗವತ್‌ಧ್ಯಾನ, ಮಾನವೀಯ ಸಂಬಂಧಗಳ ಬಗ್ಗೆ ಲಕ್ಷ್ಮಿ ಹೇಳುವ ಮಾತುಗಳು. ಮನುಷ್ಯನನ್ನು ಪಕ್ವಗೊಳಿಸುವ, ಐಹಿಕವಾಗಿ ತೃಪ್ತಿಯುತ್ತಲೂ, ಆಧ್ಯಾತ್ಮಿಕವಾಗಿ ಔನ್ನತ್ಯದತ್ತಲೂ ನಡೆಸುವ– ಈ ಸೂಚನೆಗಳಿಗೆ ವಿಪ್ರನ ಕತೆ ಒಂದು ಹಂದರ ಮಾತ್ರ. ಮುಖ್ಯ ಲಕ್ಷ್ಮಿ ನೆಲೆಸುವಲ್ಲಿ ಸುಖ ಶಾಂತಿಗಳಿರಬೇಕು – ಅದಕ್ಕೆ ಬೇಕಾದ ಪರಿಕರಗಳು ಇಲ್ಲಿ ವಿವರಿತವಾಗಿರುವುವು.

---

( 16 ನೇ ಪುಟದಿಂದ )

ಜೀವ ದೊಲ್ಲಭ ಎನ್ನ ಸೆರಗ ಬಿಡೊ
ಗಂಡ ಕಂಡರೆ ಎನ್ನಗುಂಡಿಗಿಕ್ಸುವ ಹರಿ
ಪುಂಡರೀಕಾಕ್ಷ ಎನ್ನ ಸೆರಗ ಬಿಡೊ

– ಎಂಬು ಬಹು ಆರ್ತಳಾಗಿ ಬೇಡುತ್ತಾಳೆ.

ಕೃಷ್ಣನೊಡನೆ ಏಕಾಂತದಲ್ಲಿ ಸರಸವಾಡಲು ಮನಸ್ಸಿದ್ದ ಗೋಪಿಯು ಬಹು ಶೃಂಗಾರದಿಂದ ಅಲಂಕೃತಳಾಗಿ ಅತ್ತೆಸಿಗಾಗಿ ದಾರಿಕಾಯುತ್ತ ಹಾಲು ಕಾಯಿಸುವ ಸಮಯದಲ್ಲಿ ಕೃಷ್ಣನೇ ಬಂದು ದಾರಿಗಟ್ಟಿ ಸರಸವಾಡಲು ತೊಡಗಿದಾಗ–

ಕರವ ಪಿಡಿದರೆನ್ನ ನವರಸ ಮುತ್ತಿನ ಸರಗಳು
ಹರಿದಾವು ಮುಟ್ಟದಿರೊ
ಭರದಿ ಮುದ್ದುಕೊಡುವರೇನೊ ಅತ್ತತ್ತ ಸರಿಯೊ
ನಮ್ಮವರು ಕಂಡಾರು
ಹಾಲು ಉಕ್ಕಿತೋ ಹಾದಿಯ ಬಿಡು.

– ಎಂದು ಅದೆಷ್ಟು ಬೇಡಿಕೊಂಡರೂ ತನ್ನನ್ನು ಗಾಢಾಲಿಂಗನದಲ್ಲಿ ಬಂಧಿಸಿದ ಕೃಷ್ಣನೆದುರು ಬಹುಲಜ್ಜಿತಳಾಗಿ ಪುನಃ ಮೊರೆಯಿಡುತ್ತಾಳೆ.

"ಪುರುಷವುಳ್ಳವಳು ನಾ ಪುರುಷರು
ನೋಡ್ಯಾರು
ಗುರುತುಕಂಡರೆ ಕೊಲೆಯ ಮಾಡ್ಯಾರು
ಸರಸವಾಡಲು ಬೇಡ ಸಡಿಲ್ಯಾವು ಮುಡಿಹೂವು
ಸುರತ ಬೇಕಾದರೆ ಬರುವೆನು ವನದೊಳು"

ಎಂದು ಸುರತಕಾರ್ಯಕ್ಕಾಗಿ ತಾನು ಏಕಾಂತ ದಲ್ಲಿ ಬರುವದಾಗಿ ವಚನ ಕೊಡುತ್ತಾಳೆ.

ಕೃಷ್ಣನೊಡನೆ ಏಕಾಂತದಲ್ಲಿ ತಾನು ಸರಸ ವಾಡುತ್ತಿರುವ ನಿಜಸಂಗತಿ ಮಾತ್ರ ತನ್ನ ಗಂಡ, ಅತ್ತೆ, ಮಾವ, ನಾದಿನಿ ಯಾರಿಗೂ ತಿಳಿಯಬಾರ ದೆಂದು ಭಯಭೀತಳಾದ ಇನ್ನೊಬ್ಬ ನಾರಿ ಕೃಷ್ಣನ ಕಾಲಿಗೆ ಬಿದ್ದು ಪರಿಪರಿಯಿಂದ ಬೇಡಿ ಕೊಂಡರೂ ಅವಳ ಪ್ರತಿ ಮಾತಿಗೂ ತನ್ನದೇ ಆದ ಅರ್ಥವನ್ನು ಹಚ್ಚಿ ನಿರ್ಭಯದಿಂದ ಉತ್ತರಿ ಸುತ್ತಾನೆ.

"ಅಧರ ಚುಂಬಿಸದಿರೊ ರಂಗಯ್ಯ–ಅಧರ
ಸವಿಯೆಂದು ಸವಿದೇನೆ
ಎದೆಯ ಮುಟ್ಟದಿರೊ ಎಲೋ ರಂಗ–ಅದು
ಮರವೊಗ್ಗೆಂದು ಪಿಡಿದೇನೆ
ಅತ್ತೆಕಂಡರೆ ಕಿಚ್ಚಿಗಿಕ್ಕೋಳೊ–ಅವಳತ್ತ
ಬಂದರೆ ಮರುಳಾಗುವಳು
ಗಂಡ ಕಂಡರೆ ಎನ್ನ ಕೊಂದಾನು–ಎದೆ
ಗುಂಡಿಗೆಷ್ಟು ಇಲ್ಲಿ ಬರಲಿಕ್ಕೆ
ನಾದಿನಿ ಎನ್ನಸೇರಳೊ–ಅತಿಮೋದವಾಗಿ
ಇಬ್ಬರಾಳುವೆ"

ಎಂದು ತನ್ನ ಧೈರ್ಯ ಸಾಹಸವನ್ನು ತೋರಿ ಸುತ್ತಾನೆ.

ಹೀಗೆ ಇನ್ನೂ ಹಲವಾರು ಇಂಥ ಶೃಂಗಾರ ರಸದ ಸಂವಾದರೂಪವಾದ ಶ್ರೀಕೃಷ್ಣ ಗೋಪಿ ಯರ ಮಾತುಗಳು ಬಹು ಮಾರ್ಮಿಕ ಹಾಗೂ ಅರ್ಥಗರ್ಭಿತವಾಗಿದ್ದು ನಮ್ಮ ನವಚೈತನ್ಯ ತುಂಬಿ ತುಳುಕಿಸುವಂತೆ ಮಾಡುತ್ತದೆ. ಇದೇ ಶೃಂಗಾರ ಹರಿಯತ್ತ ತಿರುಗಿದರೆ ಅದೇ ಭಕ್ತಿ ಎನಿಸಿ ಜನ್ಮ ಸಫಲವಾಗುತ್ತದೆ.

ಒಮ್ಮೆ ಮಾವ ಕಂಸನ ಆಮಂತ್ರಣದ ಮೇರೆಗೆ ಕೃಷ್ಣ ಗೋಕುಲ ಬಿಟ್ಟು ಮಧುರೆಗೆ ಪೋಗಲು ಸಿದ್ಧನಾದಾಗ, ಗೋಪಿಕಾಸ್ತ್ರೀಯರು ವಿರಹತಾಪದಿಂದ ಪ್ರಲಾಪಿಸುತ್ತ ಅವನನ್ನು ಹೋಗ ಗೊಡದಂತೆ ರಥಕ್ಕೆ ಅಡ್ಡಬಿದ್ದು ಬೇಡಿ ಕೊಂಬುವ ವರ್ಣನೆ ಬಹು ಮಾರ್ಮಿಕವಾಗಿದೆ.

ಪೋಗ ಬ್ಯಾಡವೊ ನಿಗಮಾನುತ ಮಧುರೆಗೆ
ಪೋಗಬ್ಯಾಡವೊ ಹರಿಯೇ
ಪೋಗುವಿ ನೀ ಪುನರಾಗಮನವೆಂದಿಗೆ ಹ್ಯಾಂಗೆ
ಜೀವಿಪೆವೋ ನಾಗಮರ್ದನ ಕೃಷ್ಣಾ

– ಎಂದು ಆರ್ತರಾಗಿ ಬೇಡುತ್ತಾರೆ. ಸದಾ ಕೃಷ್ಣನ ಅಂಗಸಂಗದಿಂದ ಮೈಮರೆತು ಅವನೊಡನೆ ರಾಸ ಕ್ರೀಡೆಯಾಡುತ್ತ, ಭಕ್ತಿಭಾವದಿಂದ ಉನ್ಮತ್ತ ರಾದ ಗೋಪಿಕಾಸ್ತ್ರೀಯರಿಗೆ ಕೃಷ್ಣನ ಅಗಲುವಿಕೆ ಯಿಂದ ವಿರಹ ತಾಪ ಹೆಚ್ಚಾಗುತ್ತದೆ.

ಪರಮಪುರುಷ ನೀನೆ ನಿನ್ನಂಗಸಂಗಕ್ಕೆ
ಸರಿಗಾಣೆ
ಸ್ಮರಿಸೆ ಮನಸು ನಿಲ್ಲದೊ ಸುರತಕೇಳಿಯಜಾಣ
ವಿಜಯವಿಠ್ಠಲ ಎನ್ನ ಕರೆದು ಮುಸುಕು ತೆಗೆದು
ತಕ್ಕೈಸೊ ಚೆನ್ನಿಗಾ ವಿರಹ ನಿಲ್ಲದು ಕಾಣೊ
ನಿನ್ನ ಕೂಡದೆ
ಗುರುತುಮಾಡಿದ ಸೊಗಸು ಮರೆಯದೊ
ಗೋಪಾಲ"

ಎಂದು ನೆನೆ ನೆನೆದು ಬಳಲುತ್ತಾರೆ.

ತನ್ನ ಕಾರ್ಯಸಾಧನೆಗಾಗಿ ಮಾವ ಕಂಸನ ಮಧುರೆಗೆ ಹೊರಟು ನಿಂತ ಕೃಷ್ಣನ ರಥಕ್ಕೆ ಗೋಪಿಕಾಸ್ತ್ರೀಯರೆಲ್ಲ ಒಟ್ಟಾಗಿ ಘೇರಾವು ಮಾಡಿ

"ಬ್ಯಾಡವೋ ಕೃಷ್ಣ ಮಧುರೆಗೆ ಪೋಗ ಬ್ಯಾಡವೊ" ಎಂದು ದುಃಖದಿಂದ ತಪ್ತರಾಗಿ ನುಡಿಯುತ್ತಾರೆ. 'ನೀನು ಮಧುರೆಗೆ ಪೋದರೆ'–

ಊರ ಒಳಗೆ ನಮಗೆಲ್ಲರು ಮಹಾಜಾರರು
ಇವರೆಂದು ಪೇಳ್ವರು
ಸ್ವಾಮಿ ದೂರಿದರ್ಯಾತಕೆ ದೂರವಲ್ಲರೊ
ಕೃಷ್ಣಾ ನಿನ್ನ
ಮೋರೆಯ ನೋಡದೆ ನಾವಿರಲಾರೆವೋ
ಊರಿಗೆಪೋದರೆ ಬಾರದೆ ನಿಲ್ಲೆವು
ದಾರಿಯ ತೋರಿಸೊ ಗುರುಶ್ರೀಶವಿಠಲಾ

ಎಂದು ಆರ್ತರಾಗಿ ಒಕ್ಕೊರಲಿನಿಂದ ಬೇಡಿ ಕೊಂಡರೂ ಸಾಧ್ಯವಾಗದಂತಾದ ಮೇಲೆ–

ಮಾಧವಾ ಮಧುರೆಗೆ ಪೋದರೆ ಮಮತೆ
ಪೂರ್ಣವು ಇರಲಿಲಾ
ಆದರಿಸಿ ಅಲ್ಲಿರುವ ವನಿತೆರು ಮೋದದಿಂದಲಿ
ನಿನ್ನ ಬಿಡರೆಲಾ

ಎಂದು ಮಧುರಾ ಪಟ್ಟಣದಲ್ಲಿರುವ ಸ್ತ್ರೀಯರ ಬಗ್ಗೆ ಎಚ್ಚರಿಕೆ ಕೊಡುತ್ತಾರೆ.

ಪಟ್ಟಣದೊಳು ದಿಟ್ಟಹೆಂಗಳೆಯರ ಬಿಟ್ಟು
ನೀ ಬರಲಾರೆ
ಬಟ್ಟಕುಚದಂಬಾಲೆಯರು ಕಣ್ಣಿಟ್ಟು ನಿನ್ನನು
ಬಿಡರೆಲಾ

ಹಳ್ಳಿಯಂತಿರುವ ಗೋಕುಲದ ಮುಗ್ಧ ಬಾಲೆಯರ ಮನಸೆಳೆದ ಕೃಷ್ಣ ಪಟ್ಟಣಸೇರಿದ ಮೇಲೆ ಅಲ್ಲಿಯ ರುಚಿ ಹತ್ತಿತೆಂದರೆ ಸಾಕು ಅವನು ಪುನಃ ಗೋಕು ಲಕ್ಕೆ ಬರಲಿಕ್ಕಿಲ್ಲವೆಂಬ ಭಯ ಆತಂಕವನ್ನು ಗೋಪಿಯರು ತೋರ್ಪಡಿಸುತ್ತಾರೆ. 'ಪಟ್ಟಣ ದವರ ಥಳಕು ಬೆಳಕು ಅವರ ವಯ್ಯಾರಕ್ಕೆ ಮನ ಸೋತು ಅವರನ್ನೇ ನೀನು ಒಲಿಸಿಕೊಂಡರೆ ಕುಲದ ಸ್ತ್ರೀಯರಾದ ನಾವುಗಳು ಪರದೇಶಿಗಳಾಗುತ್ತೇ ವೆಯೋ! ನಮ್ಮ ಪರಿವಾರದವರನ್ನೆಲ್ಲ ಬಿಟ್ಟು, ನಿನ್ನನ್ನೇ ನಂಬಿ ಬಂದಿದ್ದೇವೆ. ನೀನು ಪೋಗ ಬೇಡ ; ಇಲ್ಲಿದ್ದು ನಮ್ಮನ್ನು ಸಲಹೆ'ಂದು ಮತ್ತೆ ಮತ್ತೆ ಬೇಡುತ್ತಾರೆ.

"ಪತಿಯ ಸುತರನು ಬಿಟ್ಟು ನಿನ್ನಯವ್ರತದಿ
ನಾವಿರುತೇವಲಾ
ಪತಿತಪಾವನ ನಿನ್ನನಂಬಿದೆವು ಗತಿಯನಿತ್ತು
ಸಲಹಲಾ"

– ಎಂದು ಪರಿಪರಿಯಿಂದ ಪ್ರಾರ್ಥಿಸಿಕೊಂಡರೂ ಸಾಧ್ಯವಾಗಲಿಲ್ಲ. ಕೃಷ್ಣನ ರಥ ಸಾಗಿಯೇ ಬಿಟ್ಟಿತು. ಗೋಪಿಯರ ಮನಸ್ಸು ಖಿನ್ನವಾಯಿತು. 'ತಮಗೆ ಸಿಲುಕದ ಹಣ್ಣು ಹುಳಿ' ಎನ್ನುಂತೆ –

"ಏತರ ಚೆಲುವರಂಗಯ್ಯ ಹರಿಯೆಂಬ
ಮಾತಿಗೆ ಮರುಳಾದೆ ವಲ್ಲದೆ"

– ಎಂದು ಮಿಥ್ಯಾರೋಪವನ್ನು ಹೊರಿಸುತ್ತಾರೆ.

"ಪಡೆದ ತಾಯಿ ತನಗುಳ್ಳೊಡೆ ಗೋಪನ
ಮಡದಿಯ ಮೊಲೆಯನುಣ್ಣುವನೇ?
ಮಡದಿಯುವುಳ್ಳೊಡೆ ಅಡವಿಯೊಳಾಡುವ
ಹುಡುಗಿಯರ ಸಂಗಮಾಡುವನೇ ?"

ಎಂದು ತಮ್ಮ ತಮ್ಮಲ್ಲಿಯೇ ಸ್ತ್ರೀಬುದ್ಧಿಗೆ ತಕ್ಕಂತೆ ಆಡಿಕೊಂಡು ಮನಸ್ಸು ಹಗುರಾಗುವ ತನಕ ದೂರಿಕೊಳ್ಳುತ್ತಾರೆ.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಪುನುಗು* | ರೂ 200 |
| 4. | ಜಾಫ್ರಾ* | ರೂ 100 |
| 5. | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3000 |
| 7. | ತಿರುಪ್ಪಾವಡಾ[2] | ರೂ 6000 |
| 8. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9. | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 10. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ ಒಳಗಿನ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು ” | ರೂ 25–00 |
| ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀಕೃಷ್ಣ ಗೋಪಿಕಾ ಸ್ತ್ರೀಯರಿಗೆ ಸಂಬಂಧಿಸಿದ ಇಂಥ ಇನ್ನೂ ಹಲವಾರು ಶೃಂಗಾರರಸದ ಪದಪದ್ಯಗಳನ್ನು ದಾಸರು ತಮ್ಮ ಸಾಹಿತ್ಯದಲ್ಲಿ ವಿಪುಲವಾಗಿ ಸೃಜಿಸಿದ್ದಾರೆ. ಆದರೆ ತ್ರಿವಿಧ ಜೀವರಿಗೆ ತ್ರಿವಿಧ ಅರ್ಥವನ್ನು ಕೊಡುತ್ತದೆ ಈ ಶೃಂಗಾರ ರಸ.

ಶ್ರೀಕೃಷ್ಣ ಸರ್ವಕರ್ತೃತ್ವ ಶಕ್ತಿಯುಳ್ಳ ಪರಮಾತ್ಮ. ಆತ ತನ್ನ ಹೆಂಡತಿ ಲಕ್ಷ್ಮೀಯನ್ನೇ ಅಪೇಕ್ಷಿಸದೆ ಚತುರ್ಮುಖ ಬ್ರಹ್ಮನನ್ನು ತನ್ನ ನಾಭಿಕಮಲದಿಂದ ಸೃಷ್ಟಿಸಿದ, ಭಗವಂತನಿಗೆ ಕಾಮವಾಸನೆ ಎಲ್ಲಿ? ಸ್ವ ರತ, ಸ್ವರಮಣ, ಅನಪೇಕ್ಷಕಾಮ, ನಿದ್ರಾಹೀನ, ಅನಶನ, ಸಚ್ಚಿದಾನಂದ ರೂಪಿ, ಅಪ್ರಾಕೃತ ಶರೀರವುಳ್ಳ ಪರಮಾತ್ಮನೇ ಶ್ರೀಕೃಷ್ಣನೆಂದು ಅನೇಕ ದಾಸವರ್ಯರು ಸಾರಿದ್ದಾರೆಂದ ಮೇಲೆ, ಅಂತಹ ಕೃಷ್ಣನೇ ಈ ಪರಿ ಶೃಂಗಾರರಸದಲ್ಲಿ ಲೋಲುಪನಾದರೆ ಇನ್ನು ಮಾನವರಗತಿ ಏನು? ಎನ್ನುವ ಪ್ರಶ್ನೆ ಇಲ್ಲಿ ಉದ್ಭವಿಸುವುದು ಸಹಜ. ಆದರೆ ಕೃಷ್ಣನಲ್ಲಿ ಅತಿಕಾಮ, ಅತಿಜಾರತ್ವವನ್ನು ಸೃಷ್ಟಿಸಿದ ದಾಸರು ತಮ್ಮ ಸಾಹಿತ್ಯದಲ್ಲಿ ನೋಟಕ್ಕೆಮಾತ್ರ ಶೃಂಗಾರ ರಸವನ್ನು ಸೂರೆಗೊಳ್ಳುವಂತೆ ಮಾಡಿದ್ದಾರೆ. ಅಂತರಂಗದಲ್ಲಿ ಮಾತ್ರ ಗೋಪಿಯರು ಕೃಷ್ಣನ ಮೇಲೆ ಅಪಾರವಾದ ಭಕ್ತಿಯನ್ನಿಟ್ಟು ಮುಕ್ತಿ ಪಡೆದರೆನ್ನುವದಕ್ಕೆ ದಾಸರು ಅನೇಕ ದೃಷ್ಟಾಂತಗಳಿಂದ ಶಾಸ್ತ್ರಾಭಿಮತವಾದ ಆಧಾರಗಳಿಂದ ವಿವರಿಸಿದ್ದು ವೈಶಿಷ್ಟ್ಯಪೂರ್ಣವಾಗಿದೆ.

ಕೃತಯುಗದಲ್ಲಿ ಸಹಸ್ರಾರು ದೇವತೆಗಳು ಪರಮಾತ್ಮನನ್ನು ಕುರಿತು ತಪಸ್ಸುಮಾಡಿ ಸಾಕ್ಷಾತ್ಕರಿಸಿಕೊಂಡು ಆತನ ಅಂಗಸಂಗವನ್ನು ಬಯಸಿದರು. ಅದಕ್ಕೆ ದ್ವಾಪರಯುಗದಲ್ಲಿ ಕೃಷ್ಣನಾಗವತರಿಸಿ ಅವರವರ ಮನೋರಥವನ್ನು ಪೂರೈಸುವದಾಗಿ ಭಗವಂತನೇ ಅವರಿಗೆ ಅಭಯ ವಚನವನ್ನಿತ್ತುದಕ್ಕೆ ದ್ವಾಪರಯುಗದಲ್ಲಿ ಆ ದೇವತೆಗಳೇ ಗೋಪಿಕಾ ಸ್ತ್ರೀಯರಾಗಿ ಜನಿಸಿ ಭಗವಂತನ ಅಂಗಸಂಗದಿಂದ ಪುನೀತರಾಗಿ ಸದ್ಗತಿಯನ್ನು ಹೊಂದಿದರೆಂಬ ಅಂಶವು ಪುರಾಣಾಂತರಗಳಲ್ಲಿ ಕಂಡು ಬಂದಿದೆ. ಅದನ್ನೇ ಆಧಾರವಾಗಿಟ್ಟುಕೊಂಡ ದಾಸವರ್ಯರು ತಮ್ಮ ಪದಪದ್ಯಗಳಲ್ಲಿ ಈ ತರವಾದ ಶೃಂಗಾರರಸವನ್ನು ಸೃಜಿಸಿದ್ದಾರೆಯೇ ಹೊರತು ಇಲ್ಲಿ ಕಾಮವಾಸನೆಗೆ ಎಡೆಯಿಲ್ಲ.

ದಾಸಸಾಹಿತ್ಯದಲ್ಲಿರುವ ಇಂಥ ಶೃಂಗಾರರಸದಿಂದ ಭಾವುಕರಿಗೆ ಭಕ್ತಿ ಹುಟ್ಟುವುದಲ್ಲದೆ, ಭಗವಂತಹನ ಅನಂತ ಗುಣರೂಪಕ್ರಿಯೆಗಳ ಶ್ರೇಷ್ಠ ವ್ಯಕ್ತಿತ್ವದ ಅಭಿವ್ಯಕ್ತವಾಗುತ್ತದೆ. ತಾಮಸ ಜೀವಿಗಳಾದ ಕಾಮುಕರಿಗೆ ಮಾತ್ರ ಇಂಥ ಶೃಂಗಾರರಸದಿಂದ ಕೇವಲ ಕಾಮವಾಸನೆ ಹೆಚ್ಚುವದಲ್ಲದೆ ಇಂದ್ರಿಯಗಳ ಪತನದಿಂದ ದೈಹಿಕ ಸಂಪತ್ತೂ ನಾಶವಾಗಿ ಮನುಷ್ಯ ಜೀವನವೇ ವ್ಯರ್ಥವಾಗುತ್ತದೆ. ★

---

(14ನೇ ಪುಟದಿಂದ)

ಪರಮಾತ್ಮ ಎಲ್ಲರಲ್ಲಿಯೂ – ಎಲ್ಲ ವಸ್ತುಗಳಲ್ಲಿಯೂ ವ್ಯಾಪಿಸಿಕೊಂಡು ಸರ್ವಕ್ಕೂ ಪ್ರೇರಕನಾಗಿರುವನು – "ತೇನ ವಿನಾ ತೃಣ ಮಪಿ ನಚಲತಿ" ತಾನೆ. ನಮಗೆ ಅತ್ಯಂತ ಸನಿಹದಲ್ಲಿರುವವನೆಂದರೆ ಹರಿಯೇ. ಆದರೂ ನಾವು ಮರೆಯುವುದೂ ಅವನನ್ನೇ!

ಶ್ರೀ ಹರಿಯ ವ್ಯಾಪ್ತಿ ತತ್ತ್ವವನ್ನು ಗೋಪಾಲದಾಸರು ಬಣ್ಣಿಸುತ್ತಾರೆ.

ಸಿರಿಯಲ್ಲಿಯು ನೀನೆ ಪರಮೇಷ್ಠಿ
ಯಲ್ಲಿಯು ನೀನೆ
ಮರುತ ವಾಣಿ ಭಾರತಿ ಎಲ್ಲರಲ್ಲಿಯು
ನೀನೆ
ಉರಗನಲ್ಲಿಯು ನೀನೆ ಗರುಡನಲ್ಲಿಯು
ನೀನೆ
ಗಿರಿಜಾಪತಿಯಲ್ಲಿಯು ನೀನೆ ಸುರಪತಿ
ಯಲ್ಲಿಯು ನೀನೆ
... .. ... ... ...
ದೂರವಿಕ್ರಮ ನಮ್ಮ ಗೋಪಾಲ ವಿಠಲ
ದೂರ ದೂರ ಅತಿದೂರತರನು ನೀನೇ

ಹರಿಕಥಾಮೃತಸಾರದಲ್ಲಿ ಈ ವ್ಯಾಪ್ತಿಯನ್ನು ವಿವರಿಸಲು ಒಂದು ಸಂಧಿಯೇ ಮೀಸಲಾಗಿದೆ.

ಒಬ್ಬನಲಿ ನಿಂತಾಡುವನು
ಎಲ್ಲರೊಳುತಾನಿಪ್ಪ ತನ್ನೊಳಗೆಲ್ಲರನು
ಧರಿಸಿಹನು
ಎಲ್ಲ ಕೇಳಿದರಲ್ಲಿ ನೋಡಿದರಲ್ಲಿ
..............................

ಮುಂತಾದ ಪದ್ಯಗಳು ಸ್ವಾರಸ್ಯವಾಗಿ ಈ ತತ್ತ್ವವನ್ನರುಹುತ್ತವೆ. ಸರ್ವತ್ರದಲ್ಲೂ ಇರುವ ಶ್ರೀಹರಿ ಪ್ರಹ್ಲಾದನ ನಾರದಮಾತನ್ನು-ಬ್ರಹ್ಮದೇವರ ಮಾತನ್ನು ಲಕ್ಷ್ಮೀದೇವಿಯ ನುಡಿಯನ್ನು ಸತ್ಯಮಾಡುವುದಕ್ಕಾಗಿ (ಸೊಲ್ಲ ಲಾಲಿಸಿ.) ಹಿರಣ್ಯಕಶಿಪುವಿನ ಸಭಾಮಂದಿರದ ಸ್ತಂಭದಲ್ಲಿ ಅಭಿವ್ಯಕ್ತನಾದ ನಾರಸಿಂಹ ರೂಪದಿಂದ!

ಸರ್ವತ್ರದಲ್ಲೂ ವ್ಯಾಪ್ತನಾದ ಶ್ರೀ ಹರಿಯೇ ಸರ್ವರ ಕರ್ಮಗಳನ್ನು ಸ್ವತಂತ್ರವಾಗಿ ಮಾಡಿ ಜೀವರಿಂದ ಮಾಡಿಸುವನು–ಬಿಂಬಕ್ರಿಯೆಯನ್ನು ಅನುಸರಿಸಿಯೇ ಪ್ರತಿಬಿಂಬ ಕ್ರಿಯೆ!

ತತ್ತ್ವಾಭಿಮಾನಿ ಜಯಂತನಲ್ಲಿ ಅಂತರ್ಗತನಾಗಿದ್ದು ದಾಮೋದರರೂಪೀ ಹರಿ ಪಾದದಿಂದ ಸಂಚರಿಸುವಂತೆ ಮಾಡುವನು. ಕಣ್ಣಿನಲ್ಲಿರುವ ಸೂರ್ಯ (ತತ್ತ್ವಾಭಿಮಾನಿ) ನಲ್ಲಿ ಮಧುಸೂದನ ನೋಡಿ ನೋಡಿಸುವನು. ಕೈಯಲ್ಲಿ ದಕ್ಷ ಪ್ರಜಾಪತಿ–ಅವನಲ್ಲಿ ಪದ್ಮನಾಭ ಯಾಚಿಸಲು ಕೈಒಡ್ಡುವನು, ಒಡ್ಡಿಸುವನು, ಅವನೇ ದಾನಿಯ ಕೈಯಲ್ಲಿದ್ದು ಕೊಡಿಸುವನು, ಬಾಯಿಯಲ್ಲಿರುವ ಅಗ್ನಿಯಲ್ಲಿ ಹೃಷೀಕೇಶ ಮಾತಾಡಿಸುವನು, ರುದ್ರಾಂತರ್ಗತ ಗೋವಿಂದ ಆಶ್ಚರ್ಯ ಪಡುವಂತೆ ಮಾಡುವನು.

ಶುದ್ಧಮನಸ್ಸಿನಿಂದ ಅಮಲಭಕ್ತಿಯಿಂದ ಎಲ್ಲಿ ಅವನ ಮಹಿಮೆಯನ್ನು ಹೇಳುವರೋ ಅಲ್ಲಿ ಹರಿ ಇರುತ್ತಾನೆ. ಹರಿಸನ್ನಿಧಾನ ದೃಷ್ಟಿಯಿಟ್ಟು ನೋಡಿದರೆ ಅಲ್ಲಿ ಸ್ಥಿತನಾಗಿರುವನು. ಬಲವಂತರಿಗೆ ಬಲಪ್ರದ, ಜ್ಞಾನಿಗಳಿಗೆ ಜ್ಞಾನಪ್ರದ ಅವನೆ – ಮುಂತಾದ ತತ್ತ್ವಗಳು ಹರಿದಾಸರ ಸುಳಾದಿಗಳಲ್ಲಿ, ಸುವಾಲಿಗಳಲ್ಲಿ, ದೇವರ ನಾಮಗಳಲ್ಲಿ, ಹರಿಕಥಾಮೃತ ಸಾರದಲ್ಲಿ ತುಂಬಿವೆ.

ದ್ವೈತಸಿದ್ಧಾಂತದ ಪ್ರಕಾರ ಶ್ರೀಹರಿ ಅಣುವಿನಲ್ಲಿ ಅಣುವಾಗಿರುವನು, ಅಣುರೂಪವಾದ ಜೀವನ ಸ್ವರೂಪ ದೇಹದಲ್ಲೂ ಶ್ರೀ ಹರಿ ಆಯಾ ಆಕಾರದಿಂದಲೇ ಅಂತರ್ಯಾಮಿಯಾಗಿ ವ್ಯಾಪ್ತಿಯನ್ನು ಹೊಂದಿರುವನು. ಹಾಗೇ ಅತ್ಯಂತ ಬೃಹತ್ತಿನಲ್ಲಿ ಬೃಹದ್ರೂಪಿಯಾಗಿಯೂ ಇರುವನು. ಅಚಿಂತ್ಯಾದ್ಭುತ ಶಕ್ತಿ ಘಟನಾಘಟನ ಸಾಮರ್ಥ್ಯ ಅವನಿಗುಂಟು. ಇದನ್ನು ಹರಿದಾಸರು ವರ್ಣಿಸಿ

ದ್ದಾರೆ, ಅಣುವಾಗಬಲ್ಲ ಮಹತ್ತಾಗಬಲ್ಲ! ರೂಪವಾಗ ಬಲ್ಲ ಅರೂಪವಾಗಬಲ್ಲ. ರೂಪ ಅರೂಪ ಎರಡೊಂದಾಗ ಬಲ್ಲ, ವ್ಯಕ್ತವಾಗ ಬಲ್ಲ ಅವ್ಯಕ್ತನಾಗಬಲ್ಲ. ವ್ಯಕ್ತ ಅವ್ಯಕ್ತ ಎರಡೊಂದಾಗ ಬಲ್ಲ. ಸಗುಣನಾಗಬಲ್ಲ ನಿರ್ಗುಣನಾಗಬಲ್ಲ. ಸಗುಣ ನಿರ್ಗುಣ ಎರಡೊಂದಾಗಬಲ್ಲ.

ಕನಕದಾಸರು ದೇವ ಜೀವರಿಗಿರುವ ಅಂತರವನ್ನು ಸಚಿತ್ರವಾಗಿ ಸ್ಪಷ್ಟವಾಗಿ ಬಣ್ಣಿಸಿ ವಿವರಿಸಿದ್ದಾರೆ.

ಏನೆಂದು ಕೊಂಡಾಡಿ ತುತಿಸಲೋ ದೇವ
ನಾನೇನು ಬಲ್ಲೆನೆ ನಿನ್ನಯ ಮಹಿಮೆ ಘನವ
ಹರಿ ಮುಕುಂದನು ನೀನು ನರ ಜನ್ಮ ಹುಳು ನಾನು
ಪರಮಾತ್ಮನು ನೀನು ಪಾಮರನು ನಾನು
..............................
ಕಂಬದಿಂದಲಿ ಬಂದ ಆನಂದ ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಿಗನು ನಾನು
ತಿರುಪತಿಯ ನಾಥ ಶ್ರೀವೇಂಕಟೇಶನು ನೀನು
ಸ್ಮರಿಸಿ ನಿನ್ನಯ ನಾಮ ಬದುಕುವವನು ನಾನು

ಇಂತಹ ಅಗಾಧ ಮಹಿಮೋಪೇತನಾದ ಪರಮಾತ್ಮನನ್ನು ತಿಳಿದು ಭಕ್ತಿಮಾಡಿ ಸಾಧನೆಯಿಂದ ಉದ್ಧಾರವಾಗಬೇಕು ಎಂದು ಹರಿದಾಸನು ಹಾಡಿದ್ದಾರೆ.

ತಾತ್ತ್ವಿಕವಾಗಿ ಆಳವಾಗಿ ವಿಚಾರಮಾಡಿದರೆ ನಮ್ಮದು ಎಂಬುದು ಈ ಲೋಕದಲ್ಲಿ ಏನೂ ಇಲ್ಲ ಎಂಬುದು ನಮಗೆ ತಿಳಿಯುವುದು. ಎಲ್ಲವೂ ಶ್ರೀಹರಿ ದತ್ತವಾದುದೆ. ಅವನಿಗೆ ಕೊರತೆ ಎಂಬುದಿಲ್ಲ; ಹಾಗಾದರೆ ಅವನನ್ನು ಮೆಚ್ಚಿಸುವುದೆಂತು ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಅವನು ಕೊಟ್ಟುದನ್ನು–ಅವನದನ್ನು ಅವನಿಗೆ ಅರ್ಪಿಸುವುದಷ್ಟೆ ಎಂಬುದೇ ಅದಕ್ಕೆ ಉತ್ತರ. ಈ ತತ್ತ್ವವನ್ನು ಹರಿದಾಸನು ಹೀಗೆ ಹಾಡಿದ್ದಾರೆ.

ಕೆರೆಯ ನೀರನು ಕೆರೆಗೆ ಚೆಲ್ಲಿ
ವರವ ಪಡೆದವರಂತೆ ಕಾಣಿರೊ
ಹರಿಯ ಕರುಣೆಯೊಳಾದ ಭಾಗ್ಯವ
ಹರಿ ಸಮರ್ಪಣೆ ಮಾಡಿ ಬದುಕಿರೊ

ಜೀವನಿಗೆ ಅನಿಮಿತ್ತ ಬಾಂಧವನೆಂದರೆ ಶ್ರೀಹರಿ ಒಬ್ಬನೇ. ಅವನು ಜೀವರಿಗೆ ಮಾಡುವ ಅನಿಮಿತ್ತೋಪಕಾರ ಅಪಾರ, ತೋರುವ ಕಾರುಣ್ಯ ಅನ್ಯಾದೃಶ ; ಅಂತಹ ಅವನಿಗೆ ನಾವು ಮಾಡುವುದೇನು?

ನಿನ್ನ ಚಿತ್ತ ಎನ್ನ ಭಾಗ್ಯ ಇನ್ನು ಬೇರೆನಗಿಲ್ಲ
ಮನ್ನಣೆ ಅಮನ್ನಣೆ ನಿನ್ನದೇ ಸರ್ವೇಶ

ನನಗೆ ನಂಟರು ಅನೇಕ ತೆರನೂ ಅಹುದು ನಂಟು– ಧನದಿಂದ, ತನುವಿನಿಂದ, ಮನದಿಂದ, ದಿನದಿಂದ, ಋಣದಿಂದ – ಅನುವಾಗಿ ಇದ್ದರೆ ಅಷ್ಟು ನಮ್ಮವರೆಲ್ಲ: ನಿನಗೆ ಎನಗೆ ನೆಂಟತನ ಹೀಗಲ್ಲ – ಅರೆನಿಮಿಷವಗಲದ ಅನಿಮಿತ್ತ ಬಾಂಧವನಾಗಿ ಕ್ಷಣ ಬಿಡದಲೆ ಕಾಯ್ವಗೋಪಾಲ ವಿಠಲ ನಿನಗೆ ಮಾಡುವುದೇನೋ ನಮೋ ನಮೋ ಎನ್ನಿಂದ!

ಹೀಗೆ ನಾನಾ ರೀತಿಯಲ್ಲಿ ಛಂದೋಬದ್ಧವಾಗಿ, ಶ್ರುತಿಸುಭಗವಾಗಿ, ಶ್ರುತಿಗಳಿಗೆ ಅವಿರೋಧವಾಗಿ, ಹೃದಯಾಹ್ಲಾದಕರವಾಗಿ ಹರಿದಾಸನು ದ್ವೈತ ದರ್ಶನವನ್ನು ತಮ್ಮ ಕೃತಿಗಳಲ್ಲಿ ಸರಳ ಶೈಲಿಯಲ್ಲಿ ಹಾಡಿ ಜನತೆಯ ಹೃದಯವನ್ನು ಹದನು ಮಾಡಿದರು, ಭಕ್ತಿಯನ್ನು ಉಕ್ಕಿಸಿ ಭಾವಗಳನ್ನು ಕಲಕಿ ಕಣ್ಣೀರು ಹರಿಯಿಸಿ ಮೈಮರೆಸುವ ಕೃತಿಗಳನ್ನು ನೀಡಿದರು.

ಓದಿದರೇ ಆನಂದವಾಗುವ ಈ ಸವಿ ಸಾಹಿತ್ಯವು ಶ್ರಾವ್ಯವಾಗಿ ಅರ್ಥಾನುಸಂಧಾನದಿಂದ ಹಾಡಿದರೆ, ಶ್ರೋತೃಗಳ ಮನಸ್ಸಿನ ಮೇಲಾಗುವ ಪರಿಣಾಮ ವರ್ಣನಾತೀತ.

ಜ್ಞಾನಹೀನರಾದವರಿಗೆ ಅರಿವಿನ ಅಂಜನವನ್ನು ಹಚ್ಚಿ, ಸಿದ್ಧಾಂತ ಸಾಮಾನ್ಯರಿಗೂ ಎಟುಕುವಂತೆ ನಾಡಿದ ಅಪೂರ್ವ ಜ್ಞಾನ ದಾನಿಗಳು ಹರಿದಾಸರು.

ನಿರಾಸೆಯನ್ನು ನೀಗಿ ಬದುಕನ್ನು ಆತ್ಮೋದ್ಧಾರಕ್ಕೆ ತಿರುಗಿಸಿಕೊಳ್ಳುವ ಪರಮ ರಹಸ್ಯವನ್ನು ತೋರಿದ ಓದುಗರ ಹೃತ್ತಾಪ ಪರಿ ಹಾರಕರಾದ ಗುರುಗಳು ಹರಿದಾಸರು.

---

## ಆರ್ಜಿತ ಅಭಿಷೇಕ
## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಅರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

## ಗೋವಿಂದ ರಾಮಾಯಣದಲ್ಲಿ

# ಶ್ರೀರಾಮಚಂದ್ರ

ಆಧ್ಯಾತ್ಮಿಕ ಧರ್ಮ ಭಾವನೆಗಳನ್ನು ಆಧಾರವಾಗಿಟ್ಟುಕೊಂಡು, ಪಾವನತಮವಾದ ಭಾರತೀಯ ಗರ್ಭದಿಂದ ಜನಿಸಿದ ಮತಗಳೂ, ಸಂಪ್ರದಾಯಗಳೂ ಹಲವಾರು. ಈ ಶ್ರೇಣಿಯಲ್ಲಿ 'ಸಿಖ್' ಮತವೂ ಒಂದು. ಗುರುನಾನಕನಿಂದ ಆರಂಭವಾದ ಈ ಸಿಖ್ ಮತವನ್ನು ಹತ್ತುಜನ ಗುರುಗಳು ಮುಂದುವರಿಸಿ ಪ್ರಚುರಗೊಳಿಸಿದರು. ಇದರಲ್ಲಿ ಹತ್ತನೆಯ ಗುರುವೇ "ಗೋವಿಂದಸಿಂಹ". ಈತನ ಬದುಕು ಸಂಪೂರ್ಣವಾಗಿ ತ್ಯಾಗ, ಬಲಿದಾನ, ಶೌರ್ಯ ಸಾಹಸಗಳಿಂದ ತುಂಬಿತ್ತು, ಧರ್ಮ ಸಂರಕ್ಷಣೆಯೇ ಗೋವಿಂದಸಿಂಹನ ಜೀವನದ ಮುಖ್ಯ ಲಕ್ಷ್ಯವಿತ್ತು. "ಸಕಲ ಜಗ್ಗಮೇ ಖಾಲಸಾ ಪಂಥಜಾಗ್ಯೆ ಜಗೇ ಧರ್ಮ ಹಿಂದೂ, ಸಕಲ ಭಂಡ ಭಾಜೈ"– ಎಂಬ ರಚನೆಯಿಂದ ಈತನ ಬದುಕಿನ ಗುರಿಯನ್ನು ಊಹಿಸಬಹುದಾಗಿದೆ. "ಜಗತ್ತಿನಲ್ಲಿ ಖಾಲಸಾ ಪಂಥ – ಸಿಖ್ ಸಂಪ್ರದಾಯವು ಹರಡಲಿ. ಹಿಂದೂ ಧರ್ಮವು ಜಾಗೃತವಾಗಲಿ, ನೀಚರೆಲ್ಲರೂ ಅಳಿಯಲಿ".

ಗೋವಿಂದಸಿಂಹನ ಅನುಯಾಯಿಗಳು ತನ್ನನ್ನು ಸಾಕ್ಷಾತ್ ಪರಮೇಶ್ವರನೆಂದು ಸಂಭಾವಿಸುವುದು, ಈತನಿಗೆ ಸರ್ವಥಾ ಒಪ್ಪಿಗೆಯಾಗುತ್ತಿರಲಿಲ್ಲ. "ಜೆ ಮುಝುಕೋ ಪರಮೇಸರ ಉಚ್ಚರಹಿಂ | ತೇ ನರ ಘೋರ ನರಕ ಮಹಂ ಪರಹಿಂ"– ನನ್ನನ್ನು ಭಗವಂತನೆಂದು ತಿಳಿಯುವವರು ಘೋರವಾದ ನರಕದಲ್ಲಿ ಬೀಳುವರು.

ಗುರುಗೋವಿಂದಸಿಂಹನಿಗೆ 'ಅವತಾರವಾದ'ದಲ್ಲಿ ಪೂರ್ಣವಾದ ನಂಬುಗೆಯಿತ್ತು. ಭಗವಂತನ ಮತ್ಸ್ಯ ಕೂರ್ಮಾದಿ ದಶಾವತಾರಗಳಲ್ಲಿ "ಶ್ರೀರಾಮಾವತಾರ" ಈತನಿಗೆ ಅತ್ಯಂತ ಪ್ರಿಯವಾಗಿತ್ತು. ಆದುದರಿಂದಲೇ, ಶ್ರೀರಾಮನ ಕಥೆಯನ್ನು ತಾನು ಬರೆಯಬೇಕೆಂದು ನಿಶ್ಚಯಿಸಿದನು. 'ಗೋವಿಂದ ರಾಮಾಯಣ' ಎಂಬ ಅಂಕಿತದಿಂದ ಪ್ರಸಿದ್ಧವಾದ ಈ ರಾಮಾಯಣ ಒಂದು ವಿಶಿಷ್ಟವಾದ ಶೈಲಿಯಿಂದ ಕೂಡಿದೆ.

ಶ್ರೀರಾಮಾವತಾರವಾಗುವ ಸೂಚನೆ, ಮೊದಲೇ ದಶರಥನಿಗೆ ತಿಳಿದಿತ್ತು ಎಂದು ಇಲ್ಲಿ ವಿವರಿಸಲಾಗಿದೆ. ಅಯೋಧ್ಯಾಪತಿಯಾದ, ಆತನು ರಾಜನ ಅವಶ್ಯ ಕರ್ತವ್ಯಗಳಲ್ಲಿ ಒಂದಾದ ಬೇಟೆಯ ವಿಹಾರಕ್ಕಾಗಿ ಹೋಗಿದ್ದಾನೆ. ರಾತ್ರಿಯ ವೇಳೆಯಲ್ಲಿ ಬಾಯಾರಿ ವೃದ್ಧರೂ, ಅಂಧರೂ ಆದ ತಾಯಿ – ತಂದೆಯರಿಗಾಗಿ ಶ್ರವಣಕುಮಾರನು ಬಿಂದಿಗೆಯಲ್ಲಿ ನೀರು ತುಂಬುತ್ತಿದ್ದಾನೆ. ಈ ಶಬ್ದವನ್ನು ಆಲಿಸಿದ ದಶರಥನು ಆನೆಯೆಂದು ಭ್ರಮಿಸಿ ಆ ಕುಮಾರನ ಮೇಲೆ ಬಾಣವನ್ನು ಪ್ರಯೋಗಿಸುತ್ತಾನೆ. ವಸ್ತುಸ್ಥಿತಿಯನ್ನು ಅರಿತ ನಂತರ ರಾಜನು ತಾನು ಮಾಡಿದ ದುಷ್ಕೃತ್ಯಕ್ಕಾಗಿ ಮರುಕಪಟ್ಟು ಇದಕ್ಕೆ 'ಆತ್ಮಹತ್ಯೆ'ಯೇ ಪ್ರಾಯಶ್ಚಿತ್ತವೆಂದು ಬಗೆದು ಸಿದ್ಧನಾಗುತ್ತಾನೆ. "ಹೈ ಹೈ ಸುನಾಮು ರಾವಣಾವತಾರ | ಕರಿಹೈ ಜೇ ಸಕಲ ಜಗಕೋ ಉದ್ಧಾರ್" ಎಂದು ಅಶರೀರ ವಾಣಿಯು ಆತನನ್ನು ಎಚ್ಚರಿಸುತ್ತದೆ.

ಶ್ರೀರಾಮನ ಅವತಾರ 'ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ' ಎಂಬಂತೆ, ಶಿಷ್ಟರ ರಕ್ಷಣೆಗಾಗಿ ಅಂತೆಯೇ ದುಷ್ಟರ ಶಿಕ್ಷಣಕ್ಕಾಗಿ. ಈ ಭಾವನೆಯನ್ನು–

"ಭುವ ಭಾರತಾರ್ಯೋ ಖುಷೀಶಂ ಉಬಾರ್ಯೋ
ಸಬ್ಬೈ ಸಾಧು ಹರಷೇ ಭಯೇ ಜಿತ್ ಕರಷೇ
ಕರೈ ದೇವಾ ಅರಚೇ ಕಹೈ ವೇದ ಚರಚಾ"

ಎಂಬ ಗೋವಿಂದ ರಾಮಾಯಣದ ವಾಕ್ಯಗಳು ಸ್ಪಷ್ಟಪಡಿಸಿವೆ. ಶ್ರೀರಾಮನು ದುಷ್ಟರನ್ನು ಶಿಕ್ಷಿಸಿ ಭೂದೇವಿಯು ಭಾರವನ್ನು ಇಳಿಸಿದನು. ಸಾಧುಗಳಾದ ಋಷಿಗಳನ್ನು ಉದ್ಧರಿಸಿದನು. ಅವರೆಲ್ಲರೂ ಸಂತಸಪಟ್ಟರು. ಎಲ್ಲೆಲ್ಲಿಯೂ "ಶ್ರೀರಾಮನಿಗೆ ಜಯವಾಗಲಿ" ಎಂಬ ಜಯಕಾರ ಹುಟ್ಟಿತು. ದೇವತೆಗಳು ಅರ್ಚಿಸಿದರು. ವೇದ ಚರ್ಚೆ ನಿರಂತರವಾಗಿ ಸಾಗಿತು.

ಖಾಲಸಾಪಂಥದ ಪ್ರವರ್ತಕನಾದ ಗೋವಿಂದಸಿಂಹನು ಶ್ರೀರಾಮನ ವರ್ಣನೆಯ ಪ್ರಸಂಗ ಒದಗಿದೆಡೆಗಳಲ್ಲೆಲ್ಲಾ, ಭಕ್ತ್ಯತಿಶಯದಿಂದ ಆತನನ್ನು ಪರಮ ಪವಿತ್ರ, ಅವತಾರ ಪುರುಷ, ದುಷ್ಟ ಶಿಕ್ಷಕ, ಶಿಷ್ಟ ರಕ್ಷಕ ಎಂದು ಮನದಣಿಯೆ ಹಾಡಿ ಹೊಗಳಿದ್ದಾನೆ. "ರಾಮ ಪರಮ ಪವಿತ್ರ ಹೈಂ ರಘುವಂಶಕೇ ಅವತಾರ | ದುಷ್ಟದೈತ್ಯನಕೇ ಸಂಹಾರಕ ಸಂತ ಪ್ರಾಣ ಆಧಾರ".

ಶ್ರೀರಾಮನು ಸೀತಾ ಲಕ್ಷ್ಮಣರೊಂದಿಗೆ ದಂಡಕಾರಣ್ಯವನ್ನು ಹೊಕ್ಕು, ಅಗಸ್ತ್ಯರ ಪರ್ಣಶಾಲೆಯನ್ನು ಪ್ರವೇಶಿಸಿದಾಗ, ಅವರು ಅತ್ಯಂತ ಸಂತಸದಿಂದ ಶ್ರೀರಾಮನನ್ನು ಕೊಂಡಾಡುತ್ತಾರೆ. "ರಿಖ ಅಗಸ್ತ್ಯಧಾಮ ಗಯೇ ರಾಜ ರಾಮು | ಧ್ವಜ ಧರಮ ಧಾಮ ಸಿಯಾ ಸಹಿತ ನಾಮ್" ಈ ಸನ್ನಿವೇಶದಲ್ಲಿ ಶ್ರೀರಾಮನನ್ನು 'ಧರ್ಮ ಧ್ವಜ' ಎಂದು ಸಂಬೋಧಿಸಲಾಗಿದೆ.

ಸೀತಾಪಹರಣದ ನಿಮಿತ್ತ ತನ್ನ ಮಾವನಾದ ಮಾರೀಚನ ನೆರವನ್ನು ಕೇಳಲು ಬಂದ ದಶಕಂಠನಿಗೆ, ಆತನು ಬುದ್ಧಿ ಹೇಳುತ್ತ "ದ್ವೈಕರ ಜೋರಿ ಕರೌಂ ವಿನತೀ ಸುನಿ ಕೈ ನೃಪನಾಥ ಬುರಾ ಮತಿ ಮಾನೋ

ವಿದ್ವಾನ್ ಬಿ. ಬಾಲಗಣಪತಿಭಟ್ಟ

ಶ್ರೀರಘುವೀರ ಸಹಿ ಅವತಾರ್ ತುಮ್ ಮಾನಸ ಕೈ ಸ ಸಭಾಸೋ" ಎಂದಿದ್ದಾನೆ. 'ಶ್ರೀರಾಮಚಂದ್ರ ಸುಭಗನವದವತಾರ. ವೈಕುಂಠವಾಸಿಯಾದ ಶ್ರೀಮನ್ನಾರಾಯಣನೇ ಭೂಲೋಕಕ್ಕೆ ಈ ರೂಪದಲ್ಲಿ ಬಂದಿರುವನು. ಆಯ್ಯಾ ರಾವಣ! ಅತನನ್ನು ಮನುಷ್ಯನೆಂದು ತಪ್ಪು ಭಾವಿಸದಿರು. ನಿನ್ನ ಭ್ರಮೆ ದೂರವಾಗಲಿ. ಕೈ ಜೋಡಿಸಿ ಈ ಸತ್ಯದ ಸಂಗತಿಯನ್ನು ನಿನಗೆ ತಿಳಿಸುತ್ತಿದ್ದೇನೆ. ಅನ್ಯಥಾ ಭಾವಿಸದಿರು.' ಈ ಉಪದೇಶಕ್ಕಾಕರಗದಿರುವ ರಾವಣನ ಕಪಟತನವನ್ನು ಕಂಡು, ಅವನ ಕೈಯಿಂದ ಸಾಯುವುದಕ್ಕಿಂತ, ಶ್ರೀರಾಮನ ಬಾಣಕ್ಕೆ ಬಲಿಯಾಗುವುದು ಉಚಿತ, ಇದರಿಂದ ಸದ್ಗತಿ ಪ್ರಾಪ್ತವಾಗುವುದು ಎಂದು ನಿಶ್ಚಯಿಸಿ, ನೆರವು ಕೊಡಲು ಆತನು ಸಿದ್ಧನಾಗುತ್ತಾನೆ.

ರಾಮನ ವರ್ಣನಾತೀತ ಸೌಂದರ್ಯ ಶತ್ರು ಸ್ತ್ರೀಯರಿಗೂ ತುಂಬ ಮೋಹಕವಾಗಿತ್ತು. "ಜಬೈ ರಾಮ ದೇಖೀ ಮಹಾ ರೂಪ ಲೇಖೀ | ರಹೀ ನಾಇ ಸೀಸೇಂ ಸಬೈ ನಾದ ಈಸಂ |" ಆತನ ರೂಪ ಮಾಧುರ್ಯಕ್ಕೆ ಮನಸೋತು, ತಲೆಬಾಗಿ ನಮಸ್ಕರಿಸಿ, ಆತ್ಮ ವಿಸ್ಮೃತರಾಗಿ ಆ ಸ್ತ್ರೀಯರು ಜಯಘೋಷವನ್ನು ಮಾಡಿದರು.

ಕಾಸಿನ ಬೆಲೆ, ಅತಿ ಕಮ್ಮಿಯಾದದ್ದು. ದರಿದ್ರನೂ ಈ ಕಾಸನ್ನು ತುಚ್ಛವಾಗಿ ಕಾಣುವ ಸಂಭವವಿದೆ. 'ಶ್ರೀರಾಮಚಂದ್ರನು ತನ್ನ ಅಸೀಮ ಪರಾಕ್ರಮದಿಂದ ಸ್ವರ್ಣಮಯಿಯಾದ ಲಂಕೆಯನ್ನು ಗೆದ್ದು, ತಾನು ಅದರ ಅಧಿಕಾರವನ್ನು ವಹಿಸಿಕೊಳ್ಳುವ ಸ್ಥಿತಿಯಲ್ಲಿ ಇದ್ದರೂ ವಿಭೀಷಣನಿಗೇ ಅದರ ಪಟ್ಟವನ್ನು ಕಟ್ಟಿದ್ದು ಕಾಸನ್ನು ಕೊಟ್ಟಂತೆ ಇತ್ತು' ಎಂದು ಗೋವಿಂದಸಿಂಹನು ಶ್ರೀರಘುರಾಮನ ಔದಾರ್ಯವನ್ನು "ದಯಿಾ ತಾಹಿ ಲಂಕಾ | ಜಿಮಂ ರಾಜ ಟಂಕಾ" ಎಂದು ಬಣ್ಣಿಸಿದ್ದಾನೆ.

"ಮಿಲೇ ಭರ್ತುಮಾತಂ |
ಕಹೋಸರ್ವ ಬಾತಂ |
ಧನಂ ಮಾತ ತೋಕೋ |
ಕಿಯೋ ಉಋಣ ಮೋಕೋ |
ಕಹಾದೋಷ ತೋರೋ |
ಲಿಖಾ ಲೇಖ ಮೋರೋ |
ಘಾಸೀ ಜೋ ಸು ಹೋಈ |
ಕಹೈ ಕೌನ ಕೋ ಈ"

ಇದು ಶ್ರೀರಾಮನ ಮಾತುಗಳು. ವನವಾಸದಿಂದ ಹಿಂದಿರುಗಿ, ಅಯೋಧ್ಯೆಯಲ್ಲಿ ಕೈಕೇಯಿಯನ್ನು ಕಂಡಾಗ ಆಡಿದವುಗಳು. 'ಅಮ್ಮ! ಭರತಮಾತೆ! ನಿನಗೆ ಧನ್ಯವಾದಗಳು. ನಿನ್ನಿಂದ ನಾನು ಪಿತೃಋಣ ಮುಕ್ತನಾದೆ. ನಿನ್ನ ಕಾರಣದಿಂದ ನನಗೆ ವನವಾಸ ಪ್ರಾಪ್ತಿಯಾಗಿಲ್ಲ. ಇದು ನಿನ್ನ ದೋಷವೆಂದು ಪರಿಗಣಿಸುವುದು ಯೋಗ್ಯವಲ್ಲ. ನನ್ನ ಪ್ರಾರಬ್ಧದಿಂದಲೇ ಇದು ಪ್ರಾಪ್ತವಾಯಿತು. ಆಗಬೇಕಾದದ್ದೇ ಆಯಿತು. ಇದರಲ್ಲಿ ಯಾರೊಬ್ಬರ ಕೈವಾಡವೂ ಇಲ್ಲ" ಎಂದು ಆಕೆಯನ್ನು ಸಮಾಧಾನಗೊಳಿಸುತ್ತ, ತನ್ನ ಸದ್ಗುಣಗಳನ್ನು ಶ್ರೀರಾಮನು ಪ್ರದರ್ಶಿಸಿದ್ದಾನೆ.

ರಾಮನ ರಾಜ್ಯದಲ್ಲಿ ಆತನ ಪ್ರಭಾವದಿಂದ ಯಾರಿಗೂ ಯಾವ ಕೊರತೆಯೂ ಇರಲಿಲ್ಲ. "ದಸ ಸಹಸ್ರ ದಸ ವರ್ಷ ಪ್ರಮಾನಾ ರಾಜ ಕರಾ ಪುರ ಅಉಧ ನಿಧಾನಾ"–ಹತ್ತು ಸಾವಿರದ ಹತ್ತು ವರ್ಷಗಳ ರಾಜ್ಯ ಶಾಸನ ಮಾಡಿದ ಶ್ರೀರಾಮ, ನೂರಾರು ಯಜ್ಞಗಳನ್ನು ಅನುಷ್ಠಾನಮಾಡಿ, ಶತಮಖನಾದ ದೇವೇಂದ್ರನಿಗೂ ಭಯವನ್ನುಂಟು ಮಾಡಿದನು.

"ರಾಮ ಸಪೂತ ಜಾಹಿ ಘರ ಮಾಹೀ| ತಾಕಹುಂ ತೋಟ ಕೋಊ ಕಹಂ ನಾಹೀಂ" ಎಂದಿದ್ದಾನೆ. ಗುರುಗೋವಿಂದ ಸಿಂಹ. ರಾಮನಂತಹ ಸ್ವತಂತ್ರನುದಯಿಸಿದ ಮನೆಯಲ್ಲಿ ಯಾವ ವಿಧವಾದ ಕೊರತೆಯೂ ಇರಲಾರದು.

ಗೋವಿಂದ ಸಿಂಹನ ದೃಷ್ಟಿಯಲ್ಲಿ ಯುಗಯುಗಗಳಲ್ಲಿ ಚಿರಸ್ಥಾಯಿಯಾಗಿ ನಿಲ್ಲುವುದು ಶ್ರೀರಾಮಕಥಾ.

"ರಾಮ ಕಥಾ ಜಗ ಜಗ ಅಟಲ |

ಮೃತ್ಯುಶಯ್ಯೆಯಲ್ಲಿ ಇರುವ ಮಾನವ ಉದ್ಧಾರವಾಗಲು ಶ್ರೀರಾಮ ಮಂತ್ರವೊಂದೇ ಸಮರ್ಥ ಎಂಬುದನ್ನು "ಸಬೈ ಮಂತ್ರ ಹೀನಂ ಸಬೈ ಅಂತಕಾಲಂ ಭಜೋ ಏಕ ಚಿತ್ತಂ ಸು ಕಾಲಂ ಕೃಪಾಲಂ' ಎಂಬ ತನ್ನ ರಚನೆಯಲ್ಲಿ ವಿವರಿಸುತ್ತಾ ಶ್ರೀರಾಮ ನಾಮದ ಉಪಾಸನೆಯಿಲ್ಲದ ಬದುಕು ವ್ಯರ್ಥ ಎಂದು ಸ್ಪಷ್ಟ ಪಡಿಸಿದ್ದಾನೆ.

ದೇಸ ವಿದೇಸ ನರೇಸನ ಜೀತ್ಯ ಅನೇಕ
ಬಡೇ ಅವನೇಸ ಸಂಹಾರೇ
ಅಠೋಈ ಸಿದ್ಧಿ ಸಬೈ ನವಸಿದ್ಧಿ,
ಸಮೃದ್ಧಿ ನ ಸರ್ವ ಭರೇಗ್ರಹ ಸಾರೇ
ಚಂದ್ರಮುಖೀ ವನಿತಾ ಬಹುತೈಧರಿ
ಮೂಲಭರೇ ನಹಿಂ ಜಾತ ಸಮ್ಹಾರೇ
ನಾಮ ವಿಹೀನ ಅಧೀನ ಭಯೇ ಜಮ
ಅಂತಕೋ ನಂಗೇ ಹಿ ವಾಇಂ ಸಿಧಾರೇ

ರಾಜಾಧಿರಾಜರನ್ನು ಗೆದ್ದಿರಬಹುದು. ಯುದ್ಧದಲ್ಲಿ ಕೆಲವರನ್ನು ಕೊಂದಿರಬಹುದು, ಸಿದ್ಧಿಗಳನ್ನು ವಶಪಡಿಸಿಕೊಂಡಿರಬಹುದು, ಮನೆ ಸಂಪದ್ಭರಿತವಾಗಿರಬಹುದು, ಸ್ತ್ರೀ ಸುಂದರಿ ಯಾಗಿರಬಹುದು, ಇಷ್ಟಿದ್ದರೂ ನಾಮ ಸ್ಮರಣೆಯಿಲ್ಲದ ಬಾಳು ನಿಷ್ಪ್ರಯೋಜನ.

ಹೀಗೆ ಖಾಲಸಾಸಂಪ್ರದಾಯ ಪ್ರವರ್ತಕನಾದ ಗುರುಗೋವಿಂದ ಸಿಂಹ, ಧರ್ಮಮೂರ್ತಿಯಾದ ಶ್ರೀರಾಮನನ್ನು ತನ್ನ ರಚನೆಯಾದ ರಾಮಾಯಣದಲ್ಲಿ ಅತ್ಯುತ್ತಮವಾಗಿ ವರ್ಣಿಸಿ ಧನ್ಯನಾಗಿದ್ದಾನೆ. ಧರ್ಮಪ್ರಚಾರದ ಹಿರಿಯ ಗುರಿಯುಳ್ಳ ಗುರು, ಧರ್ಮವಿಗ್ರಹನಾದ ಶ್ರೀರಾಮನನ್ನು ಈ ರೀತಿ ತನ್ನ ಕಾವ್ಯದಲ್ಲಿ ಕೊಂಡಾಡಿರುವುದು ಸರ್ವದಾ ಸ್ತುತ್ಯವಾಗಿದೆ.



# ಹರಿಹರೇಶ್ವರ ದೇವಾಲಯ

ಹರಿಹರೇಶ್ವರನ ದೇವಾಲಯವು 800 ವರ್ಷಗಳಷ್ಟು ಪುರಾತನವಾದದ್ದು. ಬಹು ಸೌಮ್ಯ ಸುಂದರನಾದ ಆಜಾನುಬಾಹು ವಾದ ಈ ಮೂರ್ತಿಯನ್ನು ನೋಡುತ್ತಿದ್ದಂ ತೆಯೇ ತಿರುಪತಿಯ ಶ್ರೀನಿವಾಸನ ನೆನಪು ಬರುತ್ತೆ. ಕಾರಣ ಇವರಿಬ್ಬರು ದೇವರುಗಳ ಕಾಲೂಗಳೂ ಒಂದೇ ರೀತಿ ಇವೆ. ತಿರು ಪತಿಯ ಬೆಟ್ಟದ ಮೇಲೆ ಧುಮುಕಿದಾಗ ಆ ರಭಸಕ್ಕೆ ಭೂಮಿಯಡಿಯ ವಿರಜಾನದಿ ಯಲ್ಲಿ ಅವನ ಪಾದಗಳು ಊರಿದವು ಎಂದು ಹೇಳುವಂತೆಯೇ ಹರಿಹರೇಶ್ವರನ ಪಾದ ಗಳು ಭೂಗರ್ಭಗಲ್ಲಿ ಹೂತು ಹೋಗಿದೆ

ಹರಿಹರೇಶ್ವರನ ಬಲಪಾರ್ಶ್ವದ ಹಸ್ತದಲ್ಲಿ ಶಿವನ ಚಿಹ್ನೆಯಾದ ಶೂಲ ಮತ್ತು ಎಡ ಗಡೆ ಹರಿಯ ಅಭಯ ಹಸ್ತ. ವಕ್ಷಸ್ಥಳದ ಬಲಪಾರ್ಶ್ವದಲ್ಲಿ ಪಾರ್ವತೀ ಅಮ್ಮನ ವಿಗ್ರಹವಾದರೆ ಎಡ ಪಾರ್ಶ್ವದ ಎದೆಯ ಮೇಲೆ ಮಹಾ ಲಕ್ಷ್ಮಿಯದು. ಕಿರೀಟ ಧಾರಿಯಾದ ಇವನ ಶಿರಸ್ಸಿನಲ್ಲಿ ಬಲಪಾರ್ಶ್ವ ದಲ್ಲಿ ಈಶ್ವರನ ಜಟೆಯಲ್ಲಿ ಧರಿಸುವಂತೆ ಅರ್ಧ ಚಂದ್ರನ ಆಕೃತಿ ಎಡಭಾಗದಲ್ಲಿ ವಿಷ್ಣುವಿನ ಚಿಹ್ನೆ ಆದ ಸೂರ್ಯರೇಖೆ.

ಇಂದಿನ ಹರಿಹರ ಹಿಂದಿನ ಗುಹಾರಣ್ಯ ಕ್ಷೇತ್ರವಾಗಿತ್ತು. ಅಲ್ಲಿ ಮಹಾ ಪರಾಕ್ರಮಿ ಆದ ಗುಹಾಸುರನೆಂಬ ರಾಕ್ಷಸನು ವಾಸನಾ ಗಿದ್ದನು. ತನ್ನ ಅಸುರೀ ಸ್ವಭಾವದಿಂದ ಜನ ರಿಗೆ ತೊಂದರೆಯುಂಟು ಮಾಡಿ ಹಿಂಸಿಸು ತ್ತಿದ್ದ ಇವನಿಗೆ ಒಮ್ಮೆ ಯೋಚನೆಯಾಯಿತು. ತಾನೆಷ್ಟು ಬಲಶಾಲಿ ಆಗಿಯೂ ಸಾವನ್ನು ಜಯಿಸದ ಮೇಲೆ ಏನು ಪ್ರಯೋಜನ ಎಂದು! ಈ ಸಾವನ್ನೂ ಜಯಿಸುವುದು ಹೇಗೆ ಎಂದು ಚಿಂತಿಸಿದ, ಆವನು ಬ್ರಹ್ಮ ನನ್ನು ಕುರಿತು ಘೋರ ತಪಸ್ಸು ಮಾಡಲಾ ರಂಭಿಸಿದನು. ಅವನ ತಪೋ ಜ್ವಾಲೆಯನ್ನು ತಡೆಯಲಾಗದೆ ಭೂಮಿಯು ನಡುಗಲಾರಂ ಭಿಸಿತು. ವಾಲ್ಮೀಕಿ ಮಹರ್ಷಿಯಂತೆ ಇವನ ಮೇಲೆಯೂ ಹುತ್ತ ಬೆಳೆಯಲಾರಂಭಿಸಿತು. ಇದನ್ನು ಹೀಗೆಯೇ ಬಿಟ್ಟರೆ ಸರ್ವನಾಶವಾ ದೀತು ಎಂದು ಬ್ರಹ್ಮನು ಧರೆಗಿಳಿದು ಬಂದು ಆ ಹುತ್ತಕ್ಕೆ ತನ್ನ ಹಸ್ತ ಸ್ಪರ್ಶ ಮಾಡಿದನು. ಕೂಡಲೇ ಹುತ್ತ ಒಡೆದು ಬಿದ್ದುದಲ್ಲದೆ, ಗುಹಾಸುರನಿಗೂ ತಪಸ್ಸಿ ನಿಂದ ಎಚ್ಚರವಾಯಿತು. ಎದುರಿಗೆ ಪ್ರತ್ಯ ಕ್ಷವಾಗಿ ನಿಂತಿರುವ ಬ್ರಹ್ಮದೇವನನ್ನು ಕಂಡು ಆವನಿಗೆ ಬ್ರಹ್ಮಾನಂದವಾಯಿತು. ಅವನು ಬ್ರಹ್ಮನಿಗೆ ಸಾಷ್ಟಾಂಗ ಪ್ರಣಾಮ ಗಳನ್ನು ಸಲ್ಲಿಸಿದ.

"ಗುಹಾಸುರ ನಿನ್ನ ತಪಸ್ಸಿಗೆ ಮೆಚ್ಚಿ ರುವೆ. ನಿನಗೇನು ವರ ಬೇಕು. ಕೊಳ್ಳು" ಎಂದು ಬ್ರಹ್ಮನು ಹೇಳಿದಾಗ, ಅವನು "ನನಗೆ ಹರಿಯಿಂದಾಗಲಿ ಅಥವಾ ಹರನಿಂ ದಾಗಲೀ ಸಾವು ಕೂಡದು. ಇಷ್ಟು ಮಾತ್ರ ಕರುಣಿಸು" ಎಂದು ಕೇಳಿದ. ಬ್ರಹ್ಮನು ಕೂಡಲೇ "ತಥಾಸ್ತು ಹಾಗೆಯೇ ಆಗಲಿ," ಎಂದು ಹೇಳಿ ಅಂತರ್ಧಾನನಾದನು.

ಈಗ ಗುಹಾಸುರನ ಅಹಂಕಾರಕ್ಕೆ ಮಿತಿ ಇಲ್ಲದಂತಾಯಿತು. ಅವನು ಆ ಕೂಡಲೇ ಕೈಲಾಸಕ್ಕೆ ಹೋಗಿ ಅಲ್ಲಿಯ ಪ್ರಮಥಗಣ ಗಳನ್ನೆಲ್ಲಾ ಕಾಡಲಾರಂಭಿಸಿದ. ಕುಚೇಷ್ಟೆ ಮಾಡಿ ನರ್ತಿಲಾರಂಭಿಸಿದ. ಅಂತೆಯೇ ವೈಕುಂಠದಲ್ಲೂ ಸಹ. ಶ್ರೀಮನ್ನಾರಾಯ ಣನ ಬಳಿ ಮಹದಾನಂದದಿಂದ ಮೈಮರೆತಿದ್ದ ಸ್ವರ್ಗವಾಸಿಗಳಿಗೆ ಇವನ ಕಿರುಕುಳ ಸಹಿಸ ದಾಯಿತು. ಬ್ರಹ್ಮನಿಂದ ವರವನ್ನು ಪಡೆ ದಿರುವ ಇವನನ್ನು ಸ್ವಯಂ ತಾವು ಏನೂ ಮಾಡುವಂತಿಲ್ಲವಲ್ಲ ಎಂದು ಯೋಚಿಸಿದ ಹರಿ ಮತ್ತು ಹರರೀರ್ವರು ಬ್ರಹ್ಮನ ಬಳಿ ಇದರ ವಿಚಾರಮಾಡಲು ಬಂದರು.

'ಗುಹಾಸುರನ ಉಪಟಳವನ್ನು ಸಹಿ ಸಲು ಸಾಧ್ಯವಿಲ್ಲವಾಗಿದೆ. ನಾವು ನಿನ್ನ ವರದಿಂದಾಗಿ ನಿಸ್ಸಹಾಯಕರಾಗಿದ್ದೇವೆ. ನಿನ್ನ ಈ ಅನುಗ್ರಹ ಕೈಲಾಸ ಮತ್ತು ವಿಷ್ಣು ಲೋಕಗಳಿಗೆ ಅನಿಷ್ಟವನ್ನುಂಟು ಮಾಡಿದೆ. ಇವನನ್ನು ಪರಿಗ್ರಹಿಸು' ಎಂದು ಹರಿ ಹರರು ಬ್ರಹ್ಮದೇವನಿಗೆ ಹೇಳಿದಾಗ, "ನಾನು ಅವನಿಗೆ ಕೊಟ್ಟಿರುವ ವರ ಸರಿ ಯಾಗಿದೆ. ನನ್ನನ್ನು ಕುರಿತು ಅವನು ಅಷ್ಟು ದೀರ್ಘಕಾಲ ತಪಸ್ಸು ಮಾಡಿದ ಮೇಲೆ, ಭಕ್ತರ ಪರಾಧೀನರಾದ ನಾವು ಅವರ ಇಷ್ಟಾರ್ಥವನ್ನು ನೆರವೇರಿಸ ಬೇಕಾ ಗಿರುವುದು ನಮ್ಮ ಧರ್ಮ. ನೀವು ಹರಿ ಆಗಿ ಅಥವಾ ಹರನಾಗಿ ಅವನ ನಾಶಮಾಡ ಲಾರಿರೀ ಹೊರತು ಈರ್ವರೂ ಸೇರಿ ಅವನ ಸೊಲ್ಲಿಲ್ಲದಂತೆ ಮಾಡಬಹುದಲ್ಲ" ಎಂದು ಹೇಳಿದುದಲ್ಲದೇ ಅವರಿಚ್ಛೆಯಂತೆ ಹರಿ ಮತ್ತು ಹರರೀರ್ವರ ಅಂಶವನ್ನು ಸೇರಿಸಿ ಹರಿಹರನನ್ನು ಸೃಷ್ಟಿಸಿ ಗುಹಾರಣ್ಯಕ್ಕೆ ಕಳುಹಿಸಿ ಕೊಟ್ಟನು. ಬೃಹದಾಕಾರವಾಗಿ, ಅತಿಭಯಂಕರವಾಗಿ ಉಗ್ರರೂಪದಲ್ಲಿ ಮೇಲಿನಿಂದ ಧುಮುಕಿ ಬಂದ ಈ ಹರಿ ಹರನು ಮೊದಲು ತುಂಗಾನದಿಯ ದಡ ದಲ್ಲಿ ಇರುವ ಬಸವ ಮಂಟಪದ ಮುಂದೆ ನೀರ ಮಧ್ಯದಲ್ಲಿ ಇರುವ ಬಂಡೆಯ ಮೇಲೆ ಜೋರಾಗಿ ಜಿಗಿದುದರ ಫಲವೇ, ಇಂದಿಗೂ ಆ ಬಂಡೆಯ ಮೇಲೆ ಕಾಣ ಬರುವ ಬೃಹತ್ ಹೆಜ್ಜೆಯ ಗುರುತಾಗಿದೆ.

ಈ ಹರಿಹರನಿಗೂ ಮತ್ತು ಗುಹಾಸುರ ನಿಗೂ ಏಕಪ್ರಕಾರವಾಡಿ ದ್ವಂದಯುದ್ಧ ವಾಯಿತು. ಅಹೋರಾತ್ರಿಗಳೂ ನಡೆದ ಆ ಯುದ್ಧಕ್ಕೆ ಅಂತ್ಯವೇ ಇಲ್ಲವೇನೊ ಎಂದಾ ದಾಗ, ದೇವರು ತನ್ನ ವಿರಾಟ್ ಸ್ವರೂಪ ದರ್ಶನವನ್ನು ಗುಹಾಸುರನಿಗೆ ತೋರಿಸಿ ಅವನ ಅಪೇಕ್ಷೆ ಏನಾದರೂ ಇದ್ದರೆ ಕೋರಿ ಕೊಳ್ಳುವಂತೆ ತಿಳಿಸಿದ. ಆ ವೇಳೆಗೆ ಗುಹಾ ಸುರನಿಗೆ ಜ್ಞಾನೋದಯವಾಗಿದ್ದು, ತನ್ನ ತಪ್ಪಿನ ಅರಿವುಂಟಾಗಿ ದೇವರಲ್ಲಿ ತನ್ನ ಶತಾಪರಾಧಗಳನ್ನು ಕ್ಷಮಿಸುವಂತೆ ಕೇಳಿದು ದಲ್ಲದೆ, ದೈವದ ಪಾದದ ಧೂಳು ತನ್ನ ಶಿರದಲ್ಲಿ ಸದಾ ಇರುವಂತೆ ಅನುಗ್ರಹಿಸ ಬೇಕೆಂದು ಕೇಳಿಕೊಂಡು ಶಿರಸ್ಸನ್ನು ಬಗ್ಗಿಸಿ

**ಶ್ರೀಮತಿ ಎ. ಪಂಕಜ**

ನಮಸ್ಕರಿಸಿದನು. ಆಗ ಈ ದೇವರು ಹಾಗೆ ಬಗ್ಗಿಸಿದ್ದ ಆ ಶಿರಸ್ಸನ್ನು ತನ್ನ ಪಾದದಿಂದ ಅಮುಮಿ ನೆಲಕ್ಕೆ ತಳ್ಳಿದಾಗ ಆ ಪಾದಗಳು ಪಾತಾಳದವರೆಗೂ ಇಳಿದವು. ಈ ಕಾರಣದಿಂದಲೇ ಹರಿಹರೇಶ್ವರನ ಕಾಲುಗಳು ಗಿಡ್ಡಾಗಿ ಕಾಣುವುದು. ಬ್ರಹ್ಮನು ಮಂತ್ರ ಜಲವನ್ನು ಪ್ರೋಕ್ಷಣೆ ಮಾಡುವುದರ ಮೂಲಕ ಈ ಹರಿಹರನನ್ನು ಸೌಮ್ಯ ಸುಂದರ ಮೂರ್ತಿ ಆಗಿ ಮಾಡಿದುದಲ್ಲದೆ, ಅಲ್ಲಿಯೇ ಇದ್ದು ಭಕ್ತರ ಅಭೀಷ್ಟಗಳನ್ನು ನೆರವೇರಿಸುವಂತೆ ತಿಳಿಸಿದನು.

ಈ ಶಿಲಾ ವಿಗ್ರಹ ಮೂರ್ತಿಗೆ ಹನ್ನೆರಡನೆಯ ಶತಮಾನದಲ್ಲಿಯೇ ದೇವಾಲಯವನ್ನು ಕಟ್ಟಲಾಗಿದೆ. ಆಂಧ್ರಪ್ರದೇಶದ ಚಿತ್ತೂರಿನಿಂದ ಬಂದು ಹೊಯ್ಸಳರ ಸೇನಾಧಿಪತಿ ಆಗಿದ್ದ ಪೋಲಾಳ್ವ ದಂಡಾಧಿಪನು ಈ ದೇವಾಲಯವನ್ನು ಕಟ್ಟಿಸಿದನು. ಇದರಲ್ಲಿ ಆಗಲೇ 115 ಚಿನ್ನದ ಕಲಶಗಳೂ ಚಿನ್ನದ ಗೋಪುರವೂ ಇತ್ತೆಂದು ಹೇಳಿಕೆ. ಸುಂದರವಾದ ಅನೇಕ ಬೃಹತ್ ಕಂಬಗಳುಳ್ಳ ಈ ದೇವಾಲಯವನ್ನು ನೋಡಿದಾಗ ನಮಗೆ ಹಂಪೆ ಮತ್ತು ವಿಜಯನಗರದ ಶೈಲಿಯ ನೆನಪು ಬರದೆ ಇರುವುದಿಲ್ಲ.

ದೇವಾಲಯದ ಎಡ ಬಲಗಳಲ್ಲಿ ಲಕ್ಷ್ಮಿ ಮತ್ತು ಪಾರ್ವತಿಯರ ಗುಡಿಗಳಿದ್ದವು. ಇಂದಿಗೂ ಹರಿಹರೇಶ್ವರನ ಬಲಭಾಗದ ಪಾರ್ವತಿಯ ದೇವಾಲಯದ ಭಗ್ನಾವಶೇಷದ ಕುರುಹಾಗಿ ಪಾಳುಗೋಡೆ ಇದೆ. ಎಡ ಪಾರ್ಶ್ವದಲ್ಲಿ ಮತ್ತೆ ಹೊಸದಾಗಿ ಅಮ್ಮನವರ ಪ್ರತಿಷ್ಠೆ ಆಗಿದೆ. ಈ ಲಕ್ಷ್ಮಿಯನ್ನು ಬಿಳಿಯ ಶಿಲೆಯಿಂದ ಮಾಡಿರುತ್ತೆ ಮತ್ತು ಇದರ ಮುಖ ಪಕ್ಕಕ್ಕೆ ವಾಲಿರುತ್ತೆ. ಪ್ರಾಯಶಃ ಲಕ್ಷ್ಮಿ ಪಾರ್ವತಿಯರೂ ನಾನೇ ಆಗಿದ್ದೇನೆ ಎಂದು ತೋರಿಸಲೋಸುಗ ಈ ಭಂಗಿ ಎಂದು ಕಾಣುತ್ತೆ. ಈ ಲಕ್ಷ್ಮಿಯು ಹಿಂಭಾಗದ ಗೋಡೆಯ ಮೇಲೆ ಚಾಮುಂಡೇಶ್ವರಿಯ ವರ್ಣ ಚಿತ್ರವನ್ನು ಮೂಡಿಸಿದೆ. ಪೇಷ್ವೆಗಳ ಕಾಲದಲ್ಲಿ ಈ ಅಮ್ಮನವರ ಪುನಃ ಪ್ರಾಣಪ್ರತಿಷ್ಠೆ ಆಗಿದೆ.

ಇಂದು ನಾವು ಹರಿಹರ ದೇವಾಲಯದಲ್ಲಿ ಕಾಣುವ ಚಿತ್ರ ಇದಾಗಿದೆ.

ಇದು ಹಿಂದಿನ ಇತಿಹಾಸ ಮತ್ತು ಪೌರಾಣಿಕ ಕಥೆ ಆಗಿದೆ. ಆದರೆ ನಾವು ಅದನ್ನು ವಿವೇಚಿಸಿದಾಗ ಅದರ ಮತ್ತೊಂದು ರೂಪ ನಮ್ಮೆದುರು ನಿಲ್ಲಬಲ್ಲದು.

ಜಾತಿ ಮತಗಳನ್ನು, ಆಚಾರ ಪದ್ಧತಿಗಳನ್ನು ಸಮಾಜವನ್ನು ರೂಪಿಸಿದವನು ಮಾನವ. ದೇವರಿಗೆ ಅವನ ಸೃಷ್ಟಿ ಎಲ್ಲಾ ಒಂದೇ. ಅವನಿಗೆ ಯಾರ ಮೇಲೂ ಭೇದ ಭಾವನೆ ಇಲ್ಲ, ಎಂದು ತೋರಿಸಲೋಸುಗವೇ ಹರಿಹರ.

ಹೇಗಾದರೂ ಸರಿಯೇ. ಹಿಂದೂ ಧರ್ಮದಲ್ಲಿ ಅವತಾರ ಪುರುಷನಾದ ಆ ದೇವನಿಗೆ ನಾನಾ ಹೆಸರು, ನಾನಾ ರೂಪು. ಅಂತೆಯೇ ಹರಿರಹರೇಶ್ವರನೂ ಕೂಡ ಗುಹಾರಣ್ಯ ಕ್ಷೇತ್ರದಲ್ಲಿ ( ಅಥವಾ ಇಂದಿನ ಹರಿಹರದಲ್ಲಿ ) ನೆಲಸಿ ಭಕ್ತರನ್ನು ಅನುಗ್ರಹಿಸುತ್ತಿರುವುದು ದಿಟ. ಈ ಹರಿಹರನ ಬಲಭಾಗದಲ್ಲಿ ಕಾಲ ಅಡಿಯಲ್ಲಿ ಗಣಪತಿಯೂ ಎಡಭಾಗದಲ್ಲಿ ಋಷ್ಯಶೃಂಗರೂ ಇರುವುದನ್ನು ನಾವು ಕಾಣಬಹುದು. ✶

---

(12ನೇ ಪುಟದಿಂದ)

**ಪ್ರಚಾರಮಾಡುವುದಕ್ಕೂ ದೇವಾಲಯಗಳೇ ಕಾರಣ.**

**ಅನೇಕ ದೇವಾಲಯಗಳಲ್ಲಿರುವ ಶಾಸನಗಳೂ ಆ ದೇವಾಲಯದ 'ಕೋಯಿಲುಲುಹು' ಎಂಬ ದೈನಂದಿನ ವರದಿಗಳೂ, ಇತಿಹಾಸ ದೃಷ್ಟಿಯಿಂದ ಬಹು ಉಪಯುಕ್ತವಾಗಿವೆ. ತಿರುಪತಿ ದೇವಾಲಯಕ್ಕೆ ಸಂಬಂಧಪಟ್ಟಂತೆಯೇ ಸುಮಾರು ೫೦೦ ವರ್ಷಗಳಿಗೆ ಸಂಬಂಧಿಸಿದ ಒಂದು ಸಾವಿರ ಶಾಸನಗಳು ಪ್ರಕಟವಾಗಿವೆ. ಕೋಯಿಲುಲುಹುಗಳು ದೇವಸ್ಥಾನದ ಸಂಪ್ರದಾಯಗಳನ್ನು ಆಚಾರ್ಯ ಪೀಠ ಪರಂಪರೆಗಳನ್ನು ನೌಕರಚಾಕರ ಸ್ಥಿತಿಗತಿಗಳನ್ನು ಉತ್ಸವಗಳ ವಿವರಗಳನ್ನೂ ತಿಳಿಸುತ್ತವೆ.**

**ದೇವಾಲಯಗಳಿಗೆ ಸಂಬಂಧಪಟ್ಟ ಹಾಗೆ ಅನೇಕ ಜಲಾಶಯಗಳು ನಿರ್ಮಾಣವಾಗಿವೆ. ಪ್ರತಿಯೊಂದು ದೇವಾಲಯಕ್ಕೂ ಸೇರಿದ ಹಾಗೆ ಒಂದು ಅಥವಾ ಅನೇಕ ಪುಷ್ಕರಿಣಿಗಳಿವೆ. ಅವುಗಳ ಸೋಪಾನ ಶಿಲ್ಪ ಬಹು ಮನೋಹರವಾಗಿರುತ್ತವೆ. ಅನೇಕವು ರೋಗಪರಿಹಾರಕಗಳಲ್ಲದೆ ಅನೇಕ ದೇವಾಲಯಗಳಿಗೆ ರಸ್ತೆಗಳೂ ಉಭಯ ಪಾರ್ಶ್ವದ ಸಾಲರಂಗಗಳೂ ಪಕ್ಕದ ಜಲಾಶಯಗಳೂ ತಂಗುದಾಣಗಳೂ ನಿರ್ಮಾಣವಾಗಿರುತ್ತವೆ.**

**ಮಾನವನ ಮಾನಸಿಕ ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ದೇವಾಲಯಗಳ ಪ್ರಭಾವ ಹೆಚ್ಚು. ಆದಿಕಾಲದಿಂದ ದೇವಾಲಯಗಳು ಮಾನವನ ಮೇಲೆ ನಿರೂಪಿತವಾದ ಕ್ಷೇತ್ರಗಳಲ್ಲಿ ಅತ್ಯಂತ ಪ್ರಭಾವಶಾಲಿಯಾಗಿವೆ: ಅದೊಂದು ಶಾಂತಿಧಾಮ, ಯಾವ ಚಿಕಿತ್ಸಾಲಯವೂ ಮಾಡಲಾಗದ ಚಿಕಿತ್ಸೆಯನ್ನು ಅವು ಮಾಡುವುವು, ಅವು ರೋಗ ನಿರೋಧಕ ರೋಗಪರಿಹಾರಕವೂ ಆಗಿರುತ್ತವೆ. ಈ ಪ್ರಪಂಚದ ಎಲ್ಲ ಜಂಜಡವನ್ನು ಮರೆಯಲು ಅದೊಂದೇ ಸಾಧನ. ವಾಸ್ತವವಾಗಿ ಎಲ್ಲ ಜನರ ಸೌಹಾರ್ದವನ್ನು ಹೆಚ್ಚಿಸಲು ಅವು ಪ್ರಧಾನ ಸಾಧನಗಳಾಗಿವೆ. ದೇವಾಲಯದ ಸುಂದರ ಆವರಣವೂ ಅದರಲ್ಲಿರುವ ಅತ್ಯಂತ ಸುಂದರವಾದ ಮೂರ್ತಿಗಳೂ ಅನೇಕ ಕ್ಷುಬ್ಧ ಮನಸ್ಸುಗಳಿಗೆ ನಿರಂತರ ಶಾಂತಿಯನ್ನು ನೀಡಿವೆ–ನೀಡುತ್ತಿವೆ. ಮೇಲೆ ತಿಳಿಸಿರುವಂತೆ ಅದು ಅನೇಕ ಕಲಾವಿದರಿಗೆ ಕರ್ಮಕಾರರಿಗೆ ವೃತ್ತಿ ಕಲ್ಪನೆ ಮಾಡಿದೆ. ಸಂಗೀತ ಕಥೇರಿಗಳೂ ಪ್ರವಚನಗಳೂ ಹರಿಕಥೆ ಶಿವಕಥೆಗಳೂ ಧರ್ಮ ಪ್ರಸಾರಣದ ಜತೆಗೆ ಕಲಾಭಿವೃದ್ಧಿಗೂ ಕಾರಣವಾಗಿವೆ. ಮನರಂಜನ ಸಾಧನಗಳಾಗಿವೆ. ಜ್ಞಾನಪ್ರಸಾರದ ಕೇಂದ್ರವಾಗಿವೆ. ಅಧ್ಯಾಪಕ ಮತ್ತು ಅಧ್ಯಾಯಿಗಳ ಆಶ್ರಯ ಕೇಂದ್ರವಾಗಿದೆ. ಅವು ಉಚ್ಚಪ್ರಮಾಣದ ಧನಸಂಗ್ರಹದ ಕೇಂದ್ರವಾಗಿವೆ. ಪ್ರೇರಣೆಯಿಲ್ಲದೆ ಬಲಾತ್ಕಾರವಿಲ್ಲದೆ, ಶೇಖರ ಮಾಡುವ ವೆಚ್ಚವಿಲ್ಲದೆ, ಭ್ರಷ್ಟಾಚಾರಗಳಿಂದ ಜಾರಿಹೋಗದೆ ನೇರವಾಗಿ ನಾನಾರೂಪದಲ್ಲಿ ಅರ್ಥಸಂಗ್ರಹವಾಗುತ್ತದೆ. 'ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆಯುವರಂತೆ, ಇದ್ದವರಿಂದ ಧನ ಸಂಗ್ರಹಿಸಿ ಇಲ್ಲದವರಿಗೆ ಹಂಚುವ ಕಾರ್ಯವು ಇಲ್ಲಿ ನಡೆಯುತ್ತಿದೆ. ಅನೇಕ ದೇವಾಲಯಗಳು ಬೃಹತ್ಪ್ರಮಾಣದ ಬ್ಯಾಂಕುಗಳಂತೆ ಲೇವಾ ದೇವಿಯನ್ನು ನಡೆಸಿವೆ. ಅದರ ಉಗ್ರಾಣದಿಂದ ರೋಗಿಷ್ಟರೂ, ದುರ್ಬಲರೂ, ರಿಕ್ತರೂ ತಮ್ಮ ನಿತ್ಯದ ಆಹಾರಗಳನ್ನು ಪಡೆಯುತ್ತಿದ್ದಾರೆ. ಆಗಂತುಕರಾಗಿ ಬರುತ್ತಿರುವ ಭಕ್ತಾದಿಗಳಿಗಂತೂ ಬಹು ಸಹಾಯಕವಾಗಿವೆ. ಅನೇಕ ಕೈಂಕರ್ಯಪರರೂ ದೇವಾಲಯಗಳ ಆಶ್ರಯದಲ್ಲಿಯೇ ಜೀವಿಸುವರು. ಈಗಲೂ ಪುರಿಯ ಜಗನ್ನಾಥ ದೇವಾಲಯವೊಂದರ ಆಶ್ರಯದಲ್ಲಿ ೬೦೦೦ ಜನರು ಜೀವನ ನಿರ್ವಹಣವಾಡುತ್ತಿದ್ದಾರೆ. ಅನೇಕ ದೇವಾಲಯಗಳು ಔಷಧಾಲಯಗಳನ್ನು ನಡೆ**

ಸುತ್ತಿದ್ದುದಕ್ಕೆ ಶಾಸನಾಧಾರಗಳಿವೆ. ಕೆಲವು ದೇವಾಲಗಳು ನ್ಯಾಯಾಲಯದ ಕಾರ್ಯವನ್ನು ನಿರ್ವಹಿಸಿವೆ. ಮತ್ತು ಕೆಲವು ದೇವಾಲಯಗಳು ವಿಧರ್ಮಿಗಳ ದಂಗೆ ದರೋಡೆಗಳ ಕಾಲದಲ್ಲಿ ರಕ್ಷಣಾಗೃಹಗಳಾಗಿ ಕೆಲಸಮಾಡಿವೆ. ಇವೆಲ್ಲಕ್ಕಿಂತ ದೇವಾಲಯಗಳಿಂದ ಭಾರತೀಯರಲ್ಲಿ ರಾಷ್ಟ್ರೀಯತೆಯೂ ಭಾವೈಕ್ಯವೂ ವಿಶೇಷವಾಗಿ ಬೆಳೆದಿದೆ.

ದೇವಾಲಯಗಳ ಭವಿಷ್ಯ: ಮಾನವನಿರುವ ವರೆಗೆ ಒಂದಲ್ಲ ಒಂದು ರೀತಿಯಲ್ಲಿ ದೇವಾಲಯಗಳಿದ್ದೇ ಇರುತ್ತವೆ. ಅನೇಕ ನೀತಿ ಬಾಹಿರಗಳಾದ ಕಾರ್ಯಗಳು ಆಚರಣೆಗೆ ಬರುತ್ತಿರುವ ಈ ಕಾಲದಲ್ಲಂತೂ ಅದರ ಅವಶ್ಯಕತೆ ಇದ್ದೇ ಇರುತ್ತದೆ. ಯಂತ್ರಜ್ಞಾನದಲ್ಲಿ ಬಹು ಮುಂದೆ ನಡೆದಿರುವ ಅಮೇರಿಕಾದೇಶದವರಲ್ಲಿ ಮಾನಸಿಕ ಚಿಕಿತ್ಸಾಲಯಗಳು ಹೆಚ್ಚುತ್ತಿರುವ ಈ ಕಾಲದಲ್ಲಿ, ಭಾರತೀಯರಿಗೆ ಆ ಆವಶ್ಯಕತೆಯಿಲ್ಲದಿರುವುದು ದೇವಾಲಯಗಳ ಅಸ್ತಿತ್ವದಿಂದ.ದುರ್ಮಾರ್ಗದಲ್ಲಿ ದ್ರವ್ಯಸಂಪಾದನೆ ಮಾಡುತ್ತಿರುವ ಪ್ರತಿಯೊಬ್ಬ ವ್ಯಕ್ತಿಯೂ ಭಕ್ತಿಯಿಂದಿಲ್ಲದಿದ್ದರೆ ಭಯದಿಂದಲಾದರೂ ದೇವರಿಗೆ ಒಂದು ಭಾಗವನ್ನು ಲಂಚಕೊಡಲು ಸಿದ್ಧನಾಗಿರುತ್ತಾನೆ. ಇಂತಹ ಕಾಲದಲ್ಲಿಯೂ ದೇವಾಲಯಗಳು ತಮ್ಮ ಪ್ರಭಾವವನ್ನು ಬೀರಿಯೇ ತೀರುತ್ತವೆ.

ಆದರೆ ಆ ದೇವಾಲಯಗಳನ್ನು ಸುವ್ಯವಸ್ಥೆಯಲ್ಲಿ ನಡೆಸಿಕೊಂಡು ಹೋಗುವುದು ಅವಶ್ಯಕ. ಇದಕ್ಕೆ ಸಾಧನ ದೇವಸ್ಥಾನದ ಪರಿಸರವನ್ನು ಅತ್ಯಾಕರ್ಷಕವನ್ನಾಗಿ ಮಾಡುವುದು ಅತ್ಯಾವಶ್ಯಕ. ಕೆಲವು ದೇವಾಲಯಗಳು ವಿನಾ ಉಳಿದುವು ಬಹು ಹೀನಸ್ಥಿತಿಗೆ ಇಳಿದಿವೆ. ಅವುಗಳನ್ನು ಮಾರ್ಪಡಿಸುವುದು ತುಂಬ ಆವಶ್ಯಕ, ಮೊದಲು ಅಲ್ಲಿ ಭಕ್ತಿಯುಂಟಾಗಬೇಕಾದರೆ, ಅರ್ಚಕರು ಸರಿಯಾಗಿ ಪೂಜೆ ನಡೆಸಬೇಕು 'ಅರ್ಚಕಸ್ಯ ಹರಿಃ ಸಾಕ್ಷಾತ್' ಎಂಬ ಹಿಂದಿನಿಂದ ನಾಣ್ಣುಡಿಯ ಅರ್ಥವನ್ನು ಅರ್ಚಕರು ತಿಳಿಯಬೇಕು. ಅವರು ಸ್ವತಃ ಶುದ್ಧರೂ ಶಾಸ್ತ್ರಜ್ಞರೂ ಆಗಿರಬೇಕು. ಅವರಲ್ಲಿ ಭಕ್ತಿಯಿಲ್ಲದಿದ್ದರೆ ಇತರರಲ್ಲಿ ಅವರು ಭಕ್ತಿಯನ್ನುಂಟುಮಾಡಲಾದರೂ ಹೇಗೆ ಸಾಧ್ಯ. ಅವರೂ ಮನುಷ್ಯ ಸಾಮಾನ್ಯರಾಗಿರುವುದರಿಂದ ಅವರ ಜೀವನ ಸೌಲಭ್ಯಕ್ಕೆ ಸಾಕಷ್ಟು ಕಲ್ಪಿಸುವುದು ಜನತೆಯ ಕರ್ತವ್ಯ. ಈಚೆಗೆ ಭೂಶಾಸನವು ಬಂದ ಮೇಲೆ ಅನೇಕ ದೇವಾಲಯಗಳು ತಮ್ಮ ಗ್ರಾಮ ಭೂಮಿಗಳನ್ನು ಕಳೆದುಕೊಂಡಿವೆ. ಕೆಲವು ಕಡೆ ಅರ್ಚಕರೋ ಇತರರೋ ದೇವಾಲಯದ ಜಮೀನುಗಳನ್ನು ತಮ್ಮ ಸ್ವಂತ ಆಸ್ತಿಯಂತೆ ಉಪಯೋಗಿಸುತ್ತಿದ್ದಾರೆ. ಸರ್ಕಾರವು ಸಾರ್ವತ್ರಿಕವಾದ ದೇವಾಯಗಳಿಗೆ ಸೂಕ್ತ ಉತ್ಪತ್ತಿಯಿರುವಂತೆ ನೋಡಿಕೊಳ್ಳಬೇಕು. ದೇವಸ್ಥಾನದಲ್ಲಿ ಆಸಕ್ತರಾಗಿರುವವರನ್ನು ಮಾತ್ರ ಧರ್ಮಕರ್ತರನ್ನಾಗಿ ನೇಮಿಸಬೇಕು. ಮುಖ್ಯವಾಗಿ ಜನ ಪ್ರತಿದಿನವೂ ದೇವಾಲಯಕ್ಕೆ ಹೋಗುವ ಅಭ್ಯಾಸ ಮಾಡಬೇಕು. ತಮ್ಮ ಉತ್ಪತ್ತಿಯಲ್ಲಿ ಏಕದೇಶವನ್ನು ದೇವಾಲಯಗಳಿಗೆ ಮೀಸಲಾಗಿರಿಸಬೇಕು. ದೇವಾಲಯ ದ್ರವ್ಯವು ಯಾವರೀತಿಯಲ್ಲಿಯೂ ಪೋಲಾಗದಂತೆ ನೋಡಿಕೊಳ್ಳಬೇಕು. ಸಾರ್ವಜನಿಕರಲ್ಲಿ ಸ್ವಯಂ ಸೇವಕತಂಡಗಳನ್ನು ಏರ್ಪಡಿಸಿ ನಿತ್ಯೋತ್ಸವ ಮತ್ತು ವಿಶೇಷೋತ್ಸವಗಳಲ್ಲಿ ಸಹಕರಿಸಬೇಕು. ಇದು ಕಷ್ಟವಾದ ಕೆಲಸವಲ್ಲ. ಮನುಷ್ಯನು ಯಾವಾಗಲೂ ಅನುಕರಣಜೀವಿ. 'ಮಹಾಜನೋ ಯೇನಗತಃ' ಎಂಬುದು ಅವನ ಮಾರ್ಗದರ್ಶಕ ಸೂತ್ರ. ಗಣ್ಯರಾದ ಹತ್ತು ಜನರು ದೇವಾಲಯದ ಕಾರ್ಯದಲ್ಲಿ ಭಾಗವಹಿಸಿದರೆ ಅವರನ್ನು ಅನೇಕರು ಅನುಕರಿಸುತ್ತಾರೆ. ದೇಲವಾಯದ ಆವರಣವನ್ನು ಶುದ್ಧವಾಗಿರಿಸಲು ನಗರಸಭೆಯವರೂ ಸುತ್ತಲೂ ರಮ್ಯವಾದ ಉದ್ಯಾನವನ್ನು ಬೆಳೆಸಲು ತೋಟಗಾರಿಕೆಯ ಇಲಾಖೆಯವರೂ ಸಹಕರಿಸಬಹುದು. ಪಾಳುದೇಗುಲಗಳನ್ನು ಜೀರ್ಣೋದ್ಧಾರಮಾಡುವುದು ಅಗತ್ಯವಾದ ಕೆಲಸ. ಅನೇಕ ಸಂದರ್ಭಗಳಲ್ಲಿ ದೇವಾಲಯಗಳು ಪಾಳುಬೀಳಲು ಅಲ್ಲಿ ಭಕ್ತವೃಂದವಿಲ್ಲದಿರುವುದು ಕಾರಣ. ಗ್ರಾಮವು ಹಾಳಾಗುವುದೇ ಅದಕ್ಕೆ ಕಾರಣ. ಅಂತಹವುಗಳನ್ನು ಮಹಾಜನರು ಒಟ್ಟುಸೇರಿ ಜನಸಂದಣಿಯಿರುವ ಸ್ಥಳಗಳಿಗೆ ಬದಲಾಯಿಸಬಹುದು. ಅಂತಹ ಅನೇಕವು ಬಹು ಅಭಿವೃದ್ಧಿಗೆ ಬಂದಿವೆ. ಇವೆಲ್ಲಕ್ಕಿಂತಲೂ ಅಖಿಲಭಾರತದ ನಿಗಮವೊಂದನ್ನು ಸ್ಥಾಪಿಸಿ ಒಟ್ಟಾಗಿ ಒಂದು ಮೂಲ ಧನವನ್ನು ಕೂಡಿಸಿ ಸೌಲಭ್ಯವಿರುವ ಸ್ಥಳಗಳಿಂದ ಇಲ್ಲದ ಕಡೆಗೆ ಸಹಾಯಮಾಡಿ ಎಲ್ಲಕ್ಕೂ ಆಶ್ರಯ ದೊರೆಯುವಂತೆ ಮಾಡಬಹುದು. ದೇವಾಲಯಗಳನ್ನು ಎಂದೂ ವೈಯಕ್ತಿಕ ಸಂಪಾದನಾ ಕೇಂದ್ರವನ್ನಾಗಿ ಭಾವಿಸಬಾರದು. ಸರ್ಕಾರವು ದುರ್ಬಲವಾದ ದೇವಾಲಯಗಳ ಉದ್ಧಾರಕ್ಕಾಗಿ ಒಂದು ಸಣ್ಣನಿಧಿಯನ್ನು ಏರ್ಪಡಿಸಿ ಅದರಿಂದ ಎಲ್ಲ ದುರ್ಬಲ ಸಂಸ್ಥೆಗಳನ್ನು ಉದ್ಧಾರಮಾಡಬಹುದು. ದೇವಾಲಯಗಳ ಅಭಿವೃದ್ಧಿಗೆ ಭಕ್ತನ ಭಕ್ತಿಯ ಕೇಂದ್ರೀಕರಣವೇ ಮುಖ್ಯ. ಜನತೆ ಮತ್ತು ಸರ್ಕಾರ ಭಕ್ತಿಗೆ ಕಾರಣವಾದ ಆಸ್ತಿಕತೆಯನ್ನು ಸರ್ವರಲ್ಲಿಯೂ ಬೆಳೆಸಬೇಕಾದದ್ದು ಪರಮಾವಶ್ಯಕ. ದೇವಾಲಯಗಳಿಗೆ ಯಾವ ರಾಜಕೀಯವನ್ನು ತುಂಬುವುದು ಸಲ್ಲದು. ಆಗ ದೇವಾಲಯಗಳು ಇಹೋಪ್ಯತಿಶಯವಾಗಿ ಮಾನವನ ಸರ್ವಕ್ಷೇಮದಲ್ಲಿಯೂ ಪ್ರಭಾವಶಾಲಿಯಾಗುವುದರಲ್ಲಿ ಸಂದೇಹವಿಲ್ಲ.

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಅರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯುವರೆಗೆ ಕೆಲಸಮಾಡುತ್ತದೆ.

(7ನೇ ಪುಟದಿಂದ)

ಗಳನ್ನೂ ಸುಂದರವಾಗಿ ಹಾಡುಗಳಲ್ಲಿ ಸೆರೆ ಹಿಡಿದಿದ್ದಾರೆ. ಅವುಗಳನ್ನೆಲ್ಲ ಒಂದು ಕಡೆ ಸಂಗ್ರಹಿಸಿ ಅವುಗಳಲ್ಲಿ ಪುರಂದರದಾಸ ಕೃತ ಹಾಡುಗಳು ಯಾವುವು ಎಂಬುದನ್ನು ನಿರ್ಣಯಿಸಿ–'ಆಯ್ದು', 'ಗೋಕುಲಭಾಗ್ಯ', 'ಶೈಶವಲೀಲೆ', 'ಬಾಲಲೀಲೆ' 'ಗೋಪಿಲೀಲೆ', 'ಗೋಪಿಕಾ ಪ್ರೇಮಲೀಲೆ', 'ಕಾಲೀಯ ಮರ್ದನಲೀಲೆ', 'ವೇಣುಲೀಲೆ', 'ವೇಣುನಾದಲೀಲೆ', 'ಗೋಕುಲ ನಿರ್ಗಮನ', 'ವಿವಿಧ ಭಾವಲೀಲೆ'– ಎಂಬ ಔಚಿತ್ಯ ಪೂರ್ಣ ಭಾಗಗಳನ್ನು ಈ ಸಂಕಲನದಲ್ಲಿ ಸಂಪಾದಕರು ಮಾಡಿರುವುದು ಅಭ್ಯಾಸಿಗಳಿಗೆ ಕೃಷ್ಣಲೀಲೆಯ ಸುಲಭ ದರ್ಶನವನ್ನು ಮಾಡಿಸಿಕೊಡುವಲ್ಲಿ ಯಶಸ್ವಿಯಾಗಿದೆ. 'ರಂಗಕೊಳಲನೂದಲಾಗ' ಎಂಬ ಹಾಡು ಪ್ರಸನ್ನವೆಂಕಟದಾಸರದೆಂದು ಪ್ರಚಲಿತವಿದ್ದುದು ಪುರಂದರದಾಸರೆಂದು ನಿರ್ಣಯಿಸಿ ಸಂಪಾದಿಸಿ ಈ ಸಂಕಲನದಲ್ಲಿ ಹೇಳಿರುವುದು ಉತ್ತಮ ಸಂಶೋಧನೆಗೆ, ಉತ್ತಮ ಸಾಹಿತ್ಯ ಸಂಪಾದನೆಗೆ ಒಂದು ನಿದರ್ಶನವಾಗಿದೆ.

"ಲೋಕನೀತಿ"ಯು ಮಾನವ ಕುಲದ ಸಮಾಧಾನ ಶಾಂತಿಗಳಿಗಾಗಿ ದಾಸರು ನಿಡಿದ ನೀತಿ ಬೋಧಕ ಕೃತಿಗಳ ಸಂಗ್ರಹ. ಅವುಗಳನ್ನು 'ನಾಮಸ್ಮರಣ ನೀತಿ', 'ಸಾಮಾನ್ಯ ನೀತಿ', 'ಪರ್ಯಾಯ ನೀತಿ'– ಎಂಬ ಭಾಗಗಳಲ್ಲಿ ವಿಂಗಡಿಸಿ ಪ್ರಕಟಿಸಿರುವುದು ಕ್ರಮಬದ್ಧ ಜೀವನ ಮಾರ್ಗಕ್ಕೆ ದೀವಟಿಗೆಯ ಬೆಳಕಾಗಿದೆ. ಈ ಸಂಗ್ರಹದ ಯಾವುದೇ ಪದಪದ್ಯವನ್ನು ನೋಡಿದರೂ ಅಲ್ಲಿಲ್ಲ, "ಮಾನವ ಜನ್ಮ ದೊಡ್ಡದು. ಈಸಬೇಕು ಇದು ಜಯಿಸಬೇಕು, ವೈರಾಗ್ಯಭಾಗ್ಯ ನೀಡು" ಎಂದು ಮೊದಲಾದ ಮಾನವ ಕಲ್ಯಾಣದ ವಿಚಾರಗಳೇ ತುಂಬಿ ತುಳುಕಿವೆ. ವೇದೋಪನಿಷತ್ತುಗಳ ಅನುಭಾವದ ಮಾತುಗಳ ಸ್ವಾರಸ್ಯವೆಲ್ಲ ದಾಸರ ಈ ಎಲ್ಲ ಮಾತುಗಳಲ್ಲಿ ಅಡಕವಾಗಿವೆ. ಅಲ್ಲದೆ ವೈಜ್ಞಾನಿಕ ಯುಗದ ಈ ಶತಮಾನದಲ್ಲಿಯೂ ಈ ಮಾತುಗಳ ಮೌಲ್ಯ ಮಾಸಿಲ್ಲ. ಅಚ್ಚಳಿಯದೆ ಉಳಿದಿದೆ. ಆದರೆ ಅದೆಷ್ಟೋ ಪುರಂದರದಾಸರ ಅಂಕಿತವಿರುವ ನೀತಿಬೋಧಕ ಪದಪದ್ಯಗಳನ್ನು ಈ ಸಂಗ್ರಹದಲ್ಲಿ ಕೈಬಿಡಲಾಗಿದೆ ಏಕೆಂದರೆ ಅವುಗಳೆಲ್ಲ 'ತಂದೆ ಪುರಂದರ', 'ಗುರು ತಂದೆ ಪುರಂದರ', 'ವರದ ಪುರಂದರ' ಎಂಬ ಅಂಕಿತವುಳ್ಳ ದಾಸರಿಗೆ ಸೇರಿದುವುಗಳು, ಅವುಗಳನ್ನು ಪುರಂದರದಾಸರ ಹಾಡುಗಳೆಂದೇ ಹಾಡುವ ಜನರು ಇನ್ನೂ ನಮ್ಮಲ್ಲಿದ್ದಾರೆ. ಅಂತಹ ಹಾಡುಗಳನ್ನು ಸೋಸಿ ತೆಗೆದು ಈ ಸಂಕಲನವನ್ನು ಕೊಟ್ಟರು ಬೆಟಗೇರಿಯವರು.

"ಸಂಕೀರ್ಣ ಸಂಗ್ರಹ"ವು ಈ ಮೊದಲಿನ ಐದು ಭಾಗಗಳಿಗೆ ಹೊಂದಿಕೆಯಾಗದ ಪದಪದ್ಯಗಳ ಸಂಕಲನ. ಅಲ್ಲದೆ ಇನ್ನೂ ಕೆಲವು ಪದಪದ್ಯಗಳು ಮೇಲಿನ ಐದು ಭಾಗಗಳಲ್ಲಿಯೇ ಸೇರಬೇಕಾದಂತಹವೂ ಇವೆ. ಇಂತಹ ಪದಪದ್ಯಗಳು ಹೀಗೆ ಬರಲು ಕಾರಣ, ಮೊದಲಿನ ಐದೂ ಸಂಕಲನಗಳು ಪ್ರಕಟವಾದ ಮೇಲೆ ಅಂತಹ ಪದ ಪದ್ಯಗಳು ಸಂಪಾದಕರಿಗೆ ಸಿಕ್ಕಿರುವುದೇ ಆಗಿದೆ. ಆದ್ದರಿಂದ ಅಂತಹುವುಗಳನ್ನು ಇದರಲ್ಲಿ ಸೇರಿಸಿ ಬೆಳಕಿಗೆ ತಂದಿರುವುದೂ ಒಂದು ಬಗೆಯ ಔಚಿತ್ಯವೇ ಸರಿ. ಈ ಸಂಕಲನದಲ್ಲಿ ಶ್ರೀ ಹರಿಯ ಸರ್ವೋತ್ತಮತ್ವ, ಕಾರುಣ್ಯಯಾಚನೆ, ಭಕ್ತಿಭಾವ ವಿರಸನ, ಪುರಾಣ ಕಥಾ ಸಂದರ್ಭ, ಭಾವ ಸಮಸ್ಯೆಗಳು, ಜೀವನ ವೈವಿಧ್ಯ, ಜೀವನಾನುಭವ ಚಿತ್ರಣ, ಮಂಗಲಂ – ಎಂಬ ಭಾಗಗಳನ್ನು ಮಾಡಿ ಪದಪದ್ಯಗಳನ್ನು ಅರ್ಥ ಗೌರವವನ್ನು, ಭಾವ ಗೌರವವನ್ನು, ಕಾಪಾಡಲಾಗಿದೆ. ಒಂದು ವೇಳೆ ಈ ಸಂಕಲನವನ್ನು ಸಂಪಾದಕರು ತರದೇ ಇದ್ದರೆ ಪುರಂದರದಾಸರ ಸಾಹಿತ್ಯ ಸಂಪಾದನೆ ಮತ್ತು ಪ್ರಕಟನೆ ಅಪೂರ್ಣವಾಗುತ್ತಿತ್ತು. ಏಕೆಂದರೆ ಇಲ್ಲಿ ಪರಿಪಕ್ವವಾದ ಅನೇಕ ಐತಿಹಾಸಿಕ ಅಂಶಗಳು ಕವಿಕಾವ್ಯದ ಬಗೆಗೆ ಹೊರ ಬಂದಿವೆ. ವಿಶೇಷವಾಗಿ ಪುರಂದರದಾಸರ ಜೀವನ ಚರಿತ್ರೆಯ ಬಗೆಗೆ ಪ್ರಾಮಾಣಿಕವಾದ ಐತಿಹಾಸಿಕ, ಸತ್ಯಗಳನ್ನು ಪ್ರಕಾಶಗೊಳಿಸುವಲ್ಲಿ ಇಲ್ಲಿ ಒಂದು ನಿರ್ಧಾರಕ್ಕೆ ಬಂದಂತಿವೆ. ಈ ಮಾತಿಗೆ ಈ ಸಂಕಲನದಲ್ಲಿ ಪ್ರಕಟವಾದ ಸಂಪಾದಕರ ಮಾತುಗಳು ಪುಷ್ಟಿಯನ್ನು ನೀಡುತ್ತವೆ.

ಹೀಗೆ ಈ ಆರೂ ಭಾಗಗಳು ಪುರಂದರದಾಸರದೇ ಆದ ಸಾಹಿತ್ಯ ಶಕ್ತಿಯನ್ನು ಸ್ಪಷ್ಟಗೊಳಿಸುವ ಶ್ರೇಷ್ಠ ಸಂಪಾದನಾ ಕೃತಿಗಳು.

ಇತ್ತೀಚೆಗೆ ಎಂದರೆ ೧೯೬೧ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿದ ಸೋಮನಾಥ ಕವಿಯ ಅಕ್ರೂರ ಚರಿತೆಯು ಡಾ॥ ಬೆಟಗೇರಿಯವರ ಮತ್ತೊಂದು ಶ್ರೇಷ್ಠ ಸಂಪಾದನಾ ಕೃತಿ. ಇದನ್ನು ಅವರು ಅತ್ಯಂತ ಶಾಸ್ತ್ರೋಕ್ತವಾಗಿ ಸಂಸ್ಕರಣಗೊಳಿಸಿ ಸಂಪಾದಿಸಿದ್ದಾರೆ. ಬಹಳ ಶ್ರಮಪಟ್ಟಿದ್ದಾರೆ. ಬಹುಕಾಲ ಬಾಳುವಂತೆ ಮಾಡಿದ್ದಾರೆ.

ಇದರ ಕರ್ತೃ ಸೋಮನಾಥ ಕವಿಯು ಶ್ರೀ ಕೃಷ್ಣ ಭಕ್ತನಾದ ಅಕ್ರೂರನ ಚರಿತ್ರೆಯ ಕಾರಣದೊಂದಿಗೆ ಶ್ರೀ ಕೃಷ್ಣನ ದಿವ್ಯ ಮಹಿಮೆಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. ಸಂದರ್ಭೋಚಿತವಾಗಿ ಗೀತಾಚಾರ್ಯನ ಜೀವನ ತತ್ತ್ವಗಳನ್ನು ಸೊಗಸಾಗಿ ನಿರೂಪಿಸಿದ್ದಾನೆ. ಇಲ್ಲಿ

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

ಆತನು ಅಚ್ಯುತ ಎಂಬ ಹೆಸರನ್ನು ಕೃಷ್ಣನಿಗೆ ಪರ್ಯಾಯ:ವಾಗಿ ಬಳಸಿದ್ದಾನೆ. ಈ ಅಚ್ಯುತನು ಕ್ರಿ. ಶ. ೧೫೩೦ ರಲ್ಲಿ ಆಳಿದ ವಿಜಯ ನಗರ ಸಾಮ್ರಾಜ್ಯದ ಅರಸನಾಗಿರಬೇಕೆಂದು ಸಂಪಾದಕರ ಅಭಿಪ್ರಾಯವಾಗಿದೆ. ಆದರೆ ಈ ಮಾತಿಗೆ ಇನ್ನೂ ಪ್ರಮಾಣಗಳು ಬೇಕೆಂದೂ ಅವರು ಹೇಳಿದ್ದಾರೆ. ಇದರಂತೆ ಸಂಪಾದಕರು ಹೇಳುವ ಇನ್ನೊಂದು ಅನುಮಾನವು ಮಹತ್ವದ್ದಾಗಿದೆ. ಅದೇನೆಂದರೆ ಇದೇ ಸೋಮನಾಥ ಕವಿಯು 'ವ್ಯಾಸಯೋಗಿ ಚರಿತಂ' ಎಂಬ ಸಂಸ್ಕೃತ, ಕಾವ್ಯದ ಕರ್ತೃವಾಗಿರಬೇಕೆಂಬುದು. ಹೀಗೆ ಬೆಟಗೇರಿಯವರು ಈ ಕಾವ್ಯದ ಸಂಪಾದನೆ ಮಾಡುತ್ತ ಹೊಸ ಹೊಸ ವಿಷಯಗಳನ್ನು ಹೊರಗೆಡವಿ ಸಂಶೋಧಕರಿಗೆ ಆಹ್ವಾನವನ್ನು ನೀಡಿದ್ದಾರೆ.

ಡಾ॥ ಬೆಟಗೇರಿಯವರು ಅಕ್ರೂರ ಚರಿತೆಯ ಸಂಪಾದನೆಗಾಗಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿಯ ತಾಳೋಲೆಯ ಪ್ರತಿ ಕ್ರಮಾಂಕ ೨೧೭೮ ಹಾಗೂ ೨೧೭೯ ಎಂಬುವುಗಳನ್ನು, ಮೈಸೂರು ಸರಕಾರದ ಓರಿಯಂಟಲ್ ಲೈಬ್ರರಿಯವರು ೧೯೩೩ ರಲ್ಲಿ ಬೆಳಕಿಗೆ ತಂದ ಮುದ್ರಿತ ಗ್ರಂಥವನ್ನೂ ಆಕರ ಗ್ರಂಥಗಳನ್ನಾಗಿ ಸ್ವೀಕರಿಸಿದರು. ಸಂಪಾದನೆ ಮಾಡುವಾಗ ಎಲ್ಲಿಯೂ ಮೂಲ ಕವಿಯ ಮಾತುಗಳಿಗೆ ವ್ಯತ್ಯಾಸವಾಗದಂತೆ, ಅಬದ್ಧ ಅಶುದ್ಧ ಪಾಠಾಂತರಗಳನ್ನು ಬಿಟ್ಟು, ಕಾವ್ಯದ ಗೌರವವನ್ನು ಹೆಚ್ಚಿಸಿದ್ದಾರೆ. ಕಾವ್ಯಕ್ಕೆ ಪೂರ್ಣತ್ವವನ್ನು ತಂದು ಕೊಟ್ಟಿದ್ದಾರೆ. ಆ ಮೂಲಕ ಸಂಶೋಧಕರಿಗೆ ಸಂಪಾದಕರಿಗೆ ದಾರಿ ದೀಪವನ್ನು ಹಿಡಿದಿದ್ದಾರೆ.

ಹೀಗೆ ಡಾ॥ ಬೆಟಗೇರಿ ಕೃಷ್ಣಶರ್ಮರು ಯಾವುದೇ ಕೆಲಸವನ್ನು ಕೈಗೆತ್ತಿಕೊಂಡರೂ ಅದನ್ನು ಸರ್ವಾಂಗೀಣವಾಗಿ ಗುರಿ ಮುಟ್ಟಿಸುವ ಮಹಾ ಶಕ್ತಿಯನ್ನು ಹೊಂದಿದ್ದರು. ನಿಸರ್ಗವು ಆರ್ಥಿಕ ಮುಗ್ಗಟ್ಟಿನ ಜೊತೆಗೆ ಆರೋಗ್ಯದ ಮುಗ್ಗಟನ್ನೂ ಅವರಿಗೆ ಜೀವನದುದ್ದಕ್ಕೂ ತಂದೊಡ್ಡಿದರೂ, ಅದನ್ನೆಲ್ಲವನ್ನೂ ಸ್ಥೈರ್ಯದಿಂದ ಮುಗ್ಗುಲಿಗೆ ಸೇರಿಸಿ ಕನ್ನಡ ಸಾಹಿತ್ಯ ಸಂಸ್ಕೃತಿಯ ಸೇವೆಯನ್ನು ಅಪಾರವಾಗಿ ಮಾಡಿದರು. ಲಗರ ಹರೆಯದಲ್ಲಿಯೂ 'ಕುಮಾರವ್ಯಾಸ ಭಾರತ' ವನ್ನು ಶಾಸ್ತ್ರೋಕ್ತನಾಗಿ ಸಂಸ್ಕರಣಗೊಳಿಸಿ ಸಂಪಾದನೆಯನ್ನು ಮಾಡಬೇಕೆಂಬ ಉತ್ಕಟ ಅಪೇಕ್ಷೆಯನ್ನು ಹೊಂದಿದ್ದರು. ಇಂತಹ ಹಲವಾರು ಯೋಚನೆಗಳು ಅವರ ಕಣ್ಣು ಮುಂದೆ ನಿಶ್ಚಳವಾಗಿದ್ದವು.



# ವಾರ್ತಾಲಹರಿ

## ಪುಷ್ಪಯಾಗ

ಶ್ರೀ ವೇಂಕಟೇಶ್ವರ ಸ್ವಾಮಿಯ ಜನ್ಮನಕ್ಷತ್ರವಾದ ಶ್ರವಣ ನಕ್ಷತ್ರದ ದಿನ ನಡೆಯುವ ಉತ್ಸವ ಪುಷ್ಪಯಾಗ. ದೇಶದಲ್ಲಿ ಯುದ್ಧ ಮೊದಲಾದವುಗಳೂ, ಕ್ಷಾಮ, ಅತಿವೃಷ್ಟಿ ಅನಾವೃಷ್ಟಿ ಮೊದಲಾದ ಪ್ರಕೃತಿ ವೈಪರೀತ್ಯಗಳೂ ಉಂಟಾಗದಿರುವಂತೆ ರಕ್ಷಿಸುವ ಶಕ್ತಿ ಈ ಪುಷ್ಪಯಾಗಕ್ಕೆ ಇದೆಯೆಂದು ಆಗಮಗಳಲ್ಲಿ ಹೇಳಲಾಗಿದೆ. ಈ ಪುಷ್ಪಯಾಗ ಭವಿಷ್ಯೋತ್ತರ ಪುರಾಣದಲ್ಲಿಯೂ ನಂತರ ಅನ್ನಮಾಚಾರ್ಯರ ಕೃತಿಗಳಲ್ಲಿಯೂ ಉಕ್ತವಾಗಿದ್ದು ಎರಡು ವರ್ಷಗಳ ಹಿಂದೆ ಇದನ್ನು ತಿ. ತಿ. ದೇ. ಪುನಃ ಪ್ರವೇಶಗೊಳಿಸಿತು.



ಪುಷ್ಪಯಾಗದಲ್ಲಿ ಸ್ವಾಮಿಯವರ ಶೇಷ ವಸ್ತ್ರ ಬಹುಮಾನ ಪಡೆದ ಶ್ರೀ ತಮ್ಮಣ್ಣ ಅವರು. ನೋಡುತ್ತಿರುವವರು ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ.

ಈ ಸೇವೆಯ ದಿನದಂದು ಬೆಳಗ್ಗೆ ನಿತ್ಯಾರಾಧನೆ ಪೂರ್ಣವಾಗುತ್ತಲೇ ಸ್ವಾಮಿಯ ಉತ್ಸವ ಮೂರ್ತಿಯನ್ನು ಬಂಗಾರದ ಪಲ್ಲಕ್ಕಿಯಲ್ಲಿ ಯಾಗಶಾಲೆಗೆ ಕರೆತರುವರು. ವೇದ ಪಾರಾಯಣದೊಡನೆ ಅಲ್ಲಿ ಸ್ವಾಮಿಗೆ ತುಲಸೀ ಮೂಲಾಭರಣದಿಂದ ಸಹಸ್ರಧಾರಾಭಿಷೇಕ ನಡೆದು ದ್ರಾವಿಡ ವೇದ ಪಠಣದೊಡನೆ ವಸ್ತ್ರ, ಅಮೂಲ್ಯ ಆಭರಣಾಲಂಕಾರಗಳು ನಡೆಯುತ್ತವೆ. ನಂತರ ಉತ್ಸವ ಮೂರ್ತಿಯನ್ನು ಸಂಪಂಗಿ ಮಂಟಪದಲ್ಲಿ ಧ್ಯಾನ ಪೀಠದಲ್ಲಿ ಆಸೀನಗೊಳಿಸಿ ಒಂದೊಂದು ಪುಷ್ಪದಿಂದಲೂ ವೇದಮಂತ್ರದಿಂದಲೂ ಅಲಂಕರಿಸುವರು. ಇದೇ ಸಮಯದಲ್ಲಿ ಯಾಗಶಾಲೆಯಲ್ಲಿ ವಿಷ್ಣು ಗಾಯತ್ರಿ ಮಂತ್ರ ಪಠಣದೊಡನೆ 108 ಬಿಲ್ವ ಪತ್ರಗಳಿಂದ ಹೋಮನಡೆಯುವುದು. ನಂತರ ಉತ್ಸವ ಮೂರ್ತಿಯನ್ನೂ, ಸ್ವಾಮಿ ಪತ್ನಿಯರನ್ನೂ ವಿಮಾನ ಪ್ರದಕ್ಷಿಣೆಯಲ್ಲಿ ಮೆರವಣಿಗೆಯಲ್ಲಿ ದೇವಾಲಯದೊಳಕ್ಕೆ ಕರೆತರುತ್ತಾರೆ.

ಈ ಉತ್ಸವದಲ್ಲಿ ಪಾಲುಗೊಳ್ಳಬಯಸುವ ಗೃಹಸ್ಥರು 5000 ರೂಗಳ ಶಲ್ಕ ನೀಡಬೇಕು. ಈ ಸಾರಿ ತಲಾ 5,000 ರೂಗಳ ಶಲ್ಕನೀಡಿ 23 ಮಂದಿ ಗೃಹಸ್ಥರು ಇದರಲ್ಲಿ ಭಾಗವಹಿಸಿದರು. 2450 ಕಿಲೋ ತೂಕದ 3-8 ವಿವಿಧ ಹೂವುಗಳನ್ನು ಇಂದಿನ ಉತ್ಸವದಲ್ಲಿ ವಿನಿಯೋಗಿಸಲಾಯಿತು. ಈ ಬಗೆಗಿನ ಸ್ವಾಮಿಯ ಚಿತ್ರಗಳನ್ನು ಡಿಸೆಂಬರ್ 82ರ ಸಂಚಿಕೆಯ ಒಳರಕ್ಷಾಪತ್ರದಲ್ಲಿ ಕಾಣಬಹುದು.

ಈ ಪುಷ್ಪಯಾಗದಲ್ಲಿ ಉತ್ಸಾಹ ಪೂರ್ಣವಾಗಿ ಸೇವೆ ಸಲ್ಲಿಸಿದ ತಿ. ತಿ. ದೇವಸ್ಥಾನ ಉದ್ಯಾನವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ ಅವರನ್ನು ಸ್ವಾಮಿಯ ಶೇಷ ವಸ್ತ್ರದಿಂದ ಸನ್ಮಾನಿಸಲಾಯಿತು.

ತಿ. ತಿ. ದೇ. ಪರವಾಗಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿರೆಡ್ಡಿ, ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯ ಶ್ರೀ ಕೆ. ವೀರಾರೆಡ್ಡಿ – ಮೊದಲಾದವರು ವಿಶೇಷ ಶ್ರದ್ಧಾ ಭಕ್ತಿಗಳಿಂದ ಭಾಗವಹಿಸಿ ಪುಷ್ಪಯಾಗ ಯಶಸ್ವಿಯಾಗುವಂತೆ ಮಾಡಿದರು.

## ಉತ್ತಮ ಅಧ್ಯಾಪಕ ಸನ್ಮಾನ

ಉತ್ತಮ ಅಧ್ಯಾಪಕರೆಂದು ರಾಷ್ಟ್ರಗೌರವವನ್ನು ಪಡೆದ ತಿ. ತಿ. ದೇ. ಉದ್ಯೋಗಿಗಳಾದ ಶ್ರೀ ಬಿ. ರಾಮಸುಬ್ಬಾರೆಡ್ಡಿ (ಪ್ರಿನ್ಸಿಪಾಲ್.ಎಸ್. ವಿ. ಆರ್ಟ್ಸ್ ಕಾಲೇಜು) ಕುಮಾರಿ ಜಿ. ಎಸ್. ಸರಸ್ವತಿ, ಕುಮಾರಿ, ಡಿ. ರಂಗನಾಯಕಿ ಅವರುಗಳನ್ನು ನವಂಬರ್ 18 ರ ಸಂಜೆ ಶ್ರೀ ವೆಂಕಟೇಶ್ವರ ಕಲಾಶಾಲೆಯ ಆವರಣದಲ್ಲಿ ನಡೆದ ತಿ. ತಿ. ದೇ. ಅಧ್ಯಾಪಕರ ಸಂಘದ ಬಹಿರಂಗ ಸಭೆಯಲ್ಲಿ ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿರೆಡ್ಡಿ ಅವರು ಸನ್ಮಾನಿಸಿದರು.

## ನನ್ನಯ ವರ್ಷ

ತೆಲುಗಿನ ಆದಿಕವಿಯೆಂದು ಹೆಸರಾಗಿ, ಬಹುಮಂದಿ ಕವಿಗಳಿಗೆ ಸಾವಿರವರ್ಷದಿಂದ ಸ್ಫೂರ್ತಿಯ ಸೆಲೆಯಾಗಿರುವ ತೆಲುಗು ಭಾರತಕಾರ ನನ್ನಯನ ಬಗ್ಗೆ ವಿಶೇಷ ಅಧ್ಯಯನ, ನೆನಪು, ಸ್ಮಾರಕ, ವಿಚಾರ, ಸಂಶೋಧನೆ ಪ್ರಸಾರಗಳನ್ನು ಮಾಡಲೆಂದು ಆಂಧ್ರ ಸರ್ಕಾರ ಘೋಷಿಸಿರುವ ನನ್ನಯ ವರ್ಷದ ಅಂಗವಾಗಿ ತಿ. ತಿ. ದೇ. ನನ್ನಯ ಭಾರತವನ್ನು ಟೀಕಾ ತಾತ್ಪರ್ಯಗಳೊಂದಿಗೆ ಹೊರತರಲಿದೆ. ನನ್ನಯ ಜೀವನ, ಕಾವ್ಯಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಪ್ರಬಂಧರಚನಾಸ್ಪರ್ಧೆಯನ್ನೂ ದೇವಸ್ಥಾನಗಳು ನಿರ್ವಹಿಸುತ್ತವೆ. ನನ್ನಯನ ಸ್ವಸ್ಥಳವಾದ ರಾಜಮಹೇಂದ್ರಿಯಲ್ಲಿ ಸ್ಥಾಪಿಸಲಾಗುವ ನನ್ನಯ ಶಿಲಾ ವಿಗ್ರಹವನ್ನು ತಿ. ತಿ. ದೇ ಶಿಲ್ಪಿಗಳು ತಯಾರಿಸುತ್ತಿದ್ದಾರೆ.

## ಒಳಮುಖಪತ್ರದ ಚಿತ್ರಗಳು

1) 1983 ಜನವರಿ 24 ರಿಂದ 28 ರ ವರೆಗೆ ನಡೆಯುವ ಶ್ರೀಗೋವಿಂದರಾಜಸ್ವಾಮಿ ತೆಪ್ಪೋತ್ಸವ ಭಾಗವಾದ ಪುಷ್ಕರಿಣಿ, ಹಾಗೂ ದೇವಾಲಯದ ಒಂದು ನೋಟ.

2) 1983 ನೇ ಫೆಬ್ರವರಿಯಲ್ಲಿ ಶ್ರೀನಿವಾಸ ಮಂಗಾಪುರದಲ್ಲಿ ಬ್ರಹ್ಮೋತ್ಸವ ನಡೆಯುತ್ತದೆ. ಆ ಪ್ರಯುಕ್ತ ಹಿಂದಿನ ವರ್ಷ ತೆಗೆದ ಚಿತ್ರಗಳು.



ಕೆಳಗಡೆ ಬಹುಮಾನ ವಿನಿಯೋಗ ಮಾಡುತ್ತ ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ.

ಮೇಲುಗಡೆ. ವಿಚಾರ ಸಂಕಿರಣದ ಒಂದು ದೃಶ್ಯ. ತಿ. ತಿ. ದೇ. ಉಪಕಾರ್ಯ ನಿರ್ವಹಣಾಧಿಕಾರಿ ಶ್ರೀ ಟಿ. ಎಸ್. ಎನ್. ಎಸ್. ರಾಜು, ಬಿ. ಕೆ. ರಮೇಶ ' ಎಸ್ ಷಾ, ದೇವಾದಾಯ ಇಲಾಖಾ ಮಂತ್ರಿ ಶ್ರೀ ಜಿ. ನಾಗೇಶ್ವರರಾವ್, ಬಿ. ಕೆ. ಸುಂದರೀಜಿ, ಮೊದಲಾದವರನ್ನು ಕಾಣಬಹುದು.

## ಧಾರ್ಮಿಕ ಯಜ್ಞೋಪವೀತ ಕಾರ್ಯಕ್ರಮ

ದಿನಾಂಕ 22-11-82 ರಂದು ಮುಳಬಾಗಲಿನ ಯಾಜ್ಞವಲ್ಕ್ಯಾಶ್ರಮದಲ್ಲಿ ಯೋಗೀಶ್ವರ ಯಾಜ್ಞವಲ್ಕ್ಯರ ಜಯಂತಿಯ ಶುಭ ಸಂದರ್ಭದಲ್ಲಿ 25 ವಟುಗಳಿಗೆ 'ಉಪನಯನ' ವನ್ನೇರ್ಪಡಿಸಲಾಗಿತ್ತು. ಆಶ್ರಮದ ವಾತಾವರಣವನ್ನು ನೆನಪು ಮಾಡುವಂತೆ, ಬ್ರಾಹ್ಮೀಮುಹೂರ್ತದಲ್ಲಿ ನಡೆದ ಈ ' ಸಂಸ್ಕಾರ 'ವು ಶ್ರದ್ಧಾವಂತರ ಮನ ಸೆಳೆಯುವಂತಿತ್ತು. ಸಾಮೂಹಿಕವಾಗಿ ನಡೆದ ಈ ಸಮಾರಂಭವು ಇಲ್ಲಿ ಇದೇ ಮೊದಲನೆಯದಾಗಿದ್ದು ಈ ಆಶ್ರಮದ ಮತ್ತೊಂದು ವೈಶಿಷ್ಟ್ಯವಾಗಿದೆ.

## ತಿರುಪತಿಯಲ್ಲಿ ಹಿಂದೂ ಧರ್ಮರಕ್ಷಣ ಸಂಸ್ಥೆ ಕಾರ್ಯಕ್ರಮಗಳು

ಈ ಸಂಸ್ಥೆಯ ವತಿಯಿಂದ 1983 ರ ಜನವರಿ ತಿಂಗಳಿನಲ್ಲಿ ತಿರುಪತಿಯ ಶ್ರೀ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಹನ್ನೊಂದು ವಿಶೇಷ ಕಾರ್ಯಕ್ರಮಗಳು ಏರ್ಪಾಡಾಗಿವೆ. ಅವುಗಳಲ್ಲಿ ಹಲವೆಂದರೆ 1 ರಂದು ಹಾಗೂ 22 ರ ಶನಿವಾರಗಳಲ್ಲಿ ಶ್ರೀವೆಂಕಟೇಶ್ವರ ಸಂಗೀತ ಕಲಾಶಾಲೆಯ ಅಧ್ಯಾಪಕರಿಂದ ಸಂಗೀತ. 8 ರಂದು ಶನಿವಾರ ಶ್ರೀ ನೇತಿ ಶ್ರೀರಾಮಶರ್ಮ ಅವರ ಸಂಗೀತ, 15 ರ ಶನಿವಾರ ಶ್ರೀ ಪದ್ಮಾವತೀ ಕಲಾಶಾಲೆಯ ಅಧ್ಯಾಪಕ ವೃಂದದ ಸಂಗೀತ, 29 ರ ಶನಿವಾರ ಶ್ರೀ ಅನ್ನಮಾಚಾರ್ಯ ಪ್ರಾಜೆಕ್ಟ್‌ನವರಿಂದ ಸಂಗೀತ. ಕಾರ್ಯಕ್ರಮಗಳು ಆಯಾದಿನ ರಾತ್ರಿ 7 ರಿಂದ 9-30 ವರೆಗೆ ನಡೆಯುವುವು.

## ಪ್ರಬಂಧ ರಚನಾಸ್ಪರ್ಧೆ ಬಹುಮಾನ ವಿನಿಯೋಗ

ಪ್ರಜಾಪಿತ ಬ್ರಹ್ಮಕುಮಾರಿಯರ ಈಶ್ವರೀಯ ವಿಶ್ವವಿದ್ಯಾನಿಲಯ ಹಿಂದೆ ನಿರ್ವಹಿಸಿದ ಅಂತರ ರಾಷ್ಟ್ರೀಯ ಪ್ರಬಂಧ ರಚನಾಸ್ಪರ್ಧೆಯಲ್ಲಿ ಹತ್ತು ಮಂದಿ ಬರೆದ ಪ್ರಬಂಧಗಳಿಗೆ ತಲಾ 2000ರೂಗಳ ನಗದುಬಹುಮಾನವನ್ನು ಘೋಷಿಸಿದ್ದು, ನವಂಬರ್ ತಿಂಗಳ 27, 28, ರಂದು ತಿರುಪತಿಯ ತ್ಯಾಗರಾಜ ಮಂಟಪದಲ್ಲಿ ನಡೆದ ಸಮಾರಂಭದಲ್ಲಿ ಆಯಾ ಲೇಖಕರಿಗೆ ನಗದು ಬಹುಮಾನವನ್ನು ನೀಡಲಾಯಿತು.

27 ನವಂಬರ್ 1982 ರ ಸಂಜೆ ರಾಜಯೋಗಿ ರಮೇಶ್ ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮುಖ್ಯ ಅತಿಥಿಯಾಗಿ ಆಗಮಿಸಿದ ಕೇಂದ್ರೀಯ ಸಂಸ್ಕೃತ ವಿದ್ಯಾ ಪೀಠದ ಪ್ರಿನ್ಸಿಪಾಲ್ ಶ್ರೀ ಬಾಲ ಸುಬ್ರಹ್ಮಣ್ಯಂ ಅವರು ಉತ್ತಮ ಪ್ರಬಂಧಕಾರರಿಗೆ ನಗದು ಬಹುಮಾನ ವಿನಿಯೋಗ ಮಾಡಿದರು.

28 ರಂದು ನಡೆದ 'ಪ್ರಾಚೀನ ಭಾರತ – ವಿಶ್ವ ನಾಗರಿಕತೆಯ ತೊಟ್ಟಿಲು' ಎಂಬ ಅಂಶದ ಮೇಲಿನ ವಿಚಾರಗೋಷ್ಠಿಯಲ್ಲಿ ಆಂಧ್ರ ಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಜಿ. ನಾಗೇಶ್ವರ ರಾವ್ ಅವರು ಮುಖ್ಯ ಅತಿಥಿಯಾಗಿ ಪಾಲುಗೊಂಡರು. ತಿ. ತಿ. ದೇ. ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ರಾಜು ಅವರೂ ಭಾಗವಹಿಸಿದ ಈ ಸಂಕಿರಣದಲ್ಲಿ ಬಹುಮಾನ ಪಡೆದ ಪ್ರಬಂಧಕಾರರೂ, ರಾಜಯೋಗಿಗಳಾದ ಬಿ. ಕೆ. ರಮೇಶ್. ಎಸ್. ಷಾ, ಬಿ. ಕೆ. ಉಷಾಜಿ, ಬಿ. ಕೆ. ಶಿವಕನ್ಯಾ ಮೊದಲಾದವರು ಉಪನ್ಯಾಸ ಮಾಡಿದರು.

ಪತ್ರಕರ್ತರೊಡನೆ ಮಾತನಾಡುತ್ತ ಶ್ರೀ ಬಿ. ಕೆ. ರಮೇಶ್, ಎಸ್. ಷಾ ಅವರು 1983 ರ ಫೆಬ್ರುವರಿಯಲ್ಲಿ ಬ್ರಹ್ಮ ಕುಮಾರಿಯರ ಆಧ್ಯಾತ್ಮಿಕ ವಿಶ್ವ ವಿದ್ಯಾಲಯದ ಆಶ್ರಯದಲ್ಲಿ ಈಶ್ವರೀಯ ವಿಶ್ವವಿದ್ಯಾಲಯದ ಕೇಂದ್ರ ಮೌಂಟ್ ಅಬೂವಿನಲ್ಲಿ ವಿಶ್ವಶಾಂತಿ ಸಮ್ಮೇಳನ ನಡೆಯುವುದೆಂದೂ, ಅದಕ್ಕಾಗಿ ಇತರ ಬಹುತೇಕ ರಾಷ್ಟ್ರಗಳಲ್ಲೂ, ಭಾರತೀಯ ಪ್ರಾಂತ್ಯಗಳಲ್ಲೂ ಈಗಾಗಲೇ ಪ್ರಾಂತೀಯ ಮಟ್ಟದ ಸಮ್ಮೇಳನಗಳು ನಡೆಯುತ್ತಿವೆಯೆಂದೂ ತಿಳಿಸಿದರು.

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಅತಿಥಿ ಗೃಹದ ಸಭಾಮಂದಿರದ ಬದಿಯ ಉಗ್ರಾಣದ ಮೇಲೆ ಇನ್ನೊಂದು ಅಂತಸ್ತು ಕಟ್ಟಡ ನಿರ್ಮಾಣ ಮಾಡುವ ಯೋಚನೆಯನ್ನು ಕೈ ಬಿಡಲಾಯಿತು.

* * * *

ಕೀಸರಗುಟ್ಟದ ಶ್ರೀ ರಾಮಲಿಂಗೇಶ್ವರಸ್ವಾಮಿ ದೇವಾಲಯದ ಬಳಿ 2 ಲಕ್ಷರೂಗಳ ಅಂದಾಜು ವೆಚ್ಚದ ಪುಷ್ಕರಿಣಿ ನಿರ್ಮಾಣ ಯೋಜನೆಯನ್ನು ಅಂಗೀಕರಿಸಲಾಯಿತು

* * * *

ತಿರುಪತಿಯ ಅಲಿಪಿರಿಯ ಸತ್ರದ ಕಟ್ಟಡವನ್ನು ಒಂದು ಅಂತಸ್ತು ಮಾತ್ರ ಹೆಚ್ಚಿಸಬೇಕೆಂದು ತೀರ್ಮಾನಿಸಿ ಅದಕ್ಕಾಗಿ ಬಂದಿದ್ದ ಟೆಂಡರುಗಳನ್ನು ಪರಿಶೀಲಿಸಿ ಒಪ್ಪಲಾಯಿತು.

* * * *

ತಿರುಪತಿಯ ಕಪಿಲ ತೀರ್ಥದಲ್ಲಿನ ವೇಣುಗೋಪಾಲಸ್ವಾಮಿ ದೇವಾಲಯದ ದುರಸ್ತಿ ಕಾರ್ಯಕ್ರಮವನ್ನು ಕೈಗೊಳ್ಳಬೇಕೆಂದು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ವಿದ್ಯಾಶಾಲೆಗಳಲ್ಲಿನ ಅಧ್ಯಾಪಕ ಸಿಬ್ಬಂದಿಗೆ ಎಲ್. ಟಿ. ಸಿ. ಸೌಲಭ್ಯವನ್ನು ಇತರ ಉದ್ಯೋಗಿಗಳಿಗೆ ನೀಡುವಂತೆಯೇ ನೀಡಬೇಕೆಂಬ ತಿ. ತಿ. ದೇ. ಡಿಗ್ರಿ ಕಾಲೇಜು ಅಧ್ಯಾಪಕ ಸಂಘದ ಬೇಡಿಕೆಯನ್ನು ಒಪ್ಪಲಾಯಿತು.

* * * *

ಬೆಂಗಳೂರಿನ ಆದಿಶಕ್ತಿ ದೇವಸ್ಥಾನ ಅಭಿವೃದ್ಧಿ ಸಮಿತಿಯವರು ಅದರ ಖಾಲಿ ನಿವೇಶನದೊಂದಿಗೆ ದೇವಸ್ಥಾನವನ್ನು ತಿ. ತಿ. ದೇ.,ಗಳಿಗೆ ಒಪ್ಪಿಸಲು ಬೇಡಿದಂತೆ ತಿ. ತಿ. ದೇ. ಆ ದೇವಸ್ಥಾನವನ್ನು ತಾತ್ತ್ವಿಕವಾಗಿ ಸ್ವೀಕರಿಸಲು ಒಪ್ಪಿ ಕಾರ್ಯ ನಿರ್ವಹಣಾಧಿಕಾರಿಯವರು ಮುಂದಿನ ಕ್ರಮವನ್ನು ಕೈಗೊಳ್ಳಬೇಕೆಂದು ತೀರ್ಮಾನಿಸಲಾಯಿತು.

* * * *

ರಂಗಾರೆಡ್ಡಿ ಜಿಲ್ಲೆಯ ಕೇಶವರಂನ ಬಾಲಾಜೀ ವೆಂಕಟೇಶ್ವರಸ್ವಾಮಿ ದೇವಾಲಯಕ್ಕೆ ಅಗತ್ಯವಾದ ವಿಗ್ರಹಗಳನ್ನು ಉಚಿತವಾಗಿ ತಯಾರಿಸಿ ನೀಡಲು ತೀರ್ಮಾನಿಸಲಾಯಿತು.

* * * *

ತಿರುಪತಿಯಲ್ಲಿನ ತಿ. ತಿ. ದೇ. ಕಟ್ಟಡವಾದ 'ವಕುಳ' ಭವನದಲ್ಲಿ ತಿಂಗಳಿಗೆ 10ರೂಗಳ ನಾಮ ಮಾತ್ರ ಬಾಡಿಗೆಯಲ್ಲಿ ಸ್ಥಾಪಿತವಾಗಿರುವ ಶ್ರೀ ಈಶ್ವರೀಯ ವಿಶ್ವವಿದ್ಯಾನಿಲಯವನ್ನು 31-3-83 ರವರೆಗೆ ಮುಂದುವರಿಸಲೂ, ಯಾವುದೇ ಕಾರಣದಿಂದಲೂ ಅವರು ಅದರೊಳಗೇ ಖಾಲಿ ಮಾಡಬೇಕೆಂದೂ ತಿಳಿಸಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಸೆಕ್ಯೂರಿಟಿ ಆಫೀಸರ್ ಆಗಿ ಮೇಜರ್ ದೊರೆಸ್ವಾಮಿ ಅವರನ್ನು ಆಯ್ಕೆ ಮಾಡಲಾಯಿತು.

* * * *

ಕಡಪ ನಗರದಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನೂ, ಸತ್ರವನ್ನೂ ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದ ಮುಖಮಂಟಪದ ಸಾಲಹಾರವನ್ನು ಪುನ ರ್ನಿರ್ಮಾಣಮಾಡಲು ತೀರ್ಮಾನಿಸಲಾಯಿತು

* * * *

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಶನಿವಾರ ಭಾನುವಾರಗಳಲ್ಲಿನ ಅನ್ನ ಪ್ರಸಾದಗಳ ದಿತ್ತವನ್ನು ಹೆಚ್ಚಿಸಲು ತೀರ್ಮಾನಿಸಲಾಯಿತು.

* * * *

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

1983

## ಫೆಬ್ರವರಿ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 2. | ಬುಧವಾರ | ತ್ಯಾಗರಾಜ ಆರಾಧನೆ. |
| 4. | ಶುಕ್ರವಾರ | ಶ್ರೀನಿವಾಸ ಮಂಗಾಪುರಂ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಾರಂಭ, ಸ್ವಾಮಿ ವಿವೇಕಾನಂದ ಜನ್ಮದಿನ. |
| 8. | ಮಂಗಳವಾರ | ಶ್ರೀನಿವಾಸ ಮಂಗಾಪುರದಲ್ಲಿ ಗರುಡೋತ್ಸವ |
| 11. | ಶುಕ್ರವಾರ | ಮಹಾಶಿವರಾತ್ರಿ, ಶ್ರೀನಿವಾಸ ಮಂಗಾಪುರದಲ್ಲಿ ರಥೋತ್ಸವ |
| 12. | ಶನಿವಾರ | ಶ್ರೀನಿವಾಸ ಮಂಗಾಪುರದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವದ ಚಕ್ರತೀರ್ಥ<br>ಗರುಡ ಜಯಂತಿ<br>ಪುರಂದರದಾಸ ಆರಾಧನೆ |
| 13. | ಭಾನುವಾರ | ಕುಂಭ ಸಂಕ್ರಮಣ |
| 23. | ಬುಧವಾರ | ಏಕಾದಶಿ |
| 27. | ಭಾನುವಾರ | ಕುಮಾರಧಾರಾ ಮುಕ್ಕೋಟಿ |

ಮುಂದಿನ ಸಂಚಿಕೆಯಲ್ಲಿ

### ಸಪ್ತಗಿರಿ — ಫೆಬ್ರವರಿ 1983

**ಹರಿಹರನ ಶಿವಭಕ್ತಿ**
— ಎ. ಎಸ್ ಪಂಕಜ

**ಶ್ರೀಯಃ ಪತಿ**
— ಎಸ್. ನರಸಿಂಹಾಚಾರ್

**ಗಿರಿಜಾ ಕಲ್ಯಾಣದ ಗಿರಿಜೆ**
— ಕೆ. ರಮಾನಂದ

**ವೆಂಕಟೇಶ ಮಹಾತ್ಮೆ**
— ಕೆ. ವೆಂಕಟರಾಮಾಚಾರ್ಯ

**ಪಂಪಾ ವಿರೂಪಾಕ್ಷ**
— ಕೆ. ವಾದಿರಾಜ

**ಮಹರ್ಷಿ ಅಸ್ತೀಕ**
— ಶ್ರೀನಿವಾಸ ಮಠದ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

### ತಿರುಮಲೆಯಲ್ಲಿ
### ಆರ್ಷಸದಸ್ ಕಾಯ
### ಜನವರಿ 198

ತಿರುಮಲೆಯ ಶ್ರೀ ವೆಂಕಟ ದೇವಾಲಯದ ಎದುರಿಗಿರುವ ನಲ್ಲಿ 1983 ಜನವರಿ ತಿಂಗಳಿಗಾ ಕಾರ್ಯಕ್ರಮಗಳನ್ನು ಏರ್ಪ

1 ರ ಶನಿವಾರ ಶ್ರೀಮತಿ ಇಂದಿರಾಬಾಲ ಅವರಿಂದ ಹರಿ ಭಾನುವಾರ ಶ್ರೀ ಸತ್ಯಪ್ರಸಾ ರಿಂದ ವೀಣೆ, 8 ರಂದು ಶನಿವ ಗಂಟಿ ರಾಮಮೂರ್ತಿ ಭಾಗ ಕಥೆ 9 ರಂದು ಭಾನುವಾರ ಚಾರ್ಯ ಪ್ರಾಜೆಕ್ಟ್ ನವರಿ ಸಭೆ, 14 ರಂದು ಶುಕ್ರವ ಲೀಲಾವತಿ ವೃಂದದವರಿಂದ ಭಜನ ಗೀತೆಗಳು, 15 ರಂದು ಜುವ್ವಲ ಕನಕದುರ್ಗಪ್ರಸಾ ಹರಿಕಥೆ, 16 ರಂದು ಭಾನು ನಕ್ಷತ್ರದಂದು ಶ್ರೀ ಅನ್ನ ಪ್ರಾಜೆಕ್ಟ್ ನವರಿಂದ ಸಂಗೀ ರಂದು ಶನಿವಾರ ಶ್ರೀ ಎಸ್. ಭಟ್ಟಾಚಾರ್ಯರಿಂದ ಹರಿಕ ಭಾನುವಾರ ಶ್ರೀ ಎ.ವಿ.ಎಸ್. ಅವರ ಸಂಗೀತ, 29 ರಂದು ಎಸ್. ಪಿ. ಎಚ್. ಕೃಷ್ಣಮ ಅವರ ಹರಿಕಥೆ, 30 ರಂದು ಶ್ರೀ ವೆಂಕಟೇಶ್ವರ ಸಂಗೀ ಅಧ್ಯಾಪಕರಿಂದ ಸಂಗೀತ,

ಈ ಮೇಲಿನ ಕಾರ್ಯಕ್ರಮ ದಿನ ಸಂಜೆ 6–00 ರಿಂದ 8– ಯುವುವು.

ತಿರುಮಲೆಯ ಆರ್ಷಸದ ದಲ್ಲಿ ಪ್ರತಿನಿತ್ಯ ಸಂಜೆ 4– ವರೆಗೆ ಪುರಾಣ ಪ್ರವಚನ ನ



Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

